ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೧ ಜುಲೈ ೨೦೦೫ ಸಂಚಿಕೆ ೭




ದಿನಾಂಕ ೧-೭-೨೦೦೫ ರಂದು ಕೊಪ್ಪಳ ಶ್ರೀ ಗವಿಸಿದ್ಧೇಶ್ವರ ಮಠದ ಆವರಣದಲ್ಲಿ ೧,೦೦೦ ಸಾವಿರ ವಿದ್ಯಾರ್ಥಿಗಳ ವಸತಿ ಹಾಗೂ ಪ್ರಸಾದ ನಿಲಯ ಕಟ್ಟಡದ ಅಡಿಗಲ್ಲು – ಶಂಖು ಸ್ಥಾಪನೆ ಸಮಾರಂಭವನ್ನು ಸಿದ್ಧಗಂಗಾ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನೆರವೇರಿಸಿದರು. ಈ ಸಂದರ್ಭದಲ್ಲಿ ಕೊಪ್ಪಳ ಶ್ರೀ ಗವಿಮಠದ ಮಹಾಸ್ವಾಮಿಗಳು, ಪರಮಪೂಜ್ಯ ಮುಂಡರಗಿ ಸಂಸ್ಥಾನ ಮಠದ ಜ. ಶ್ರೀ ಶ್ರೀ ಅನ್ನದಾನೇಶ್ವರ ಸ್ವಾಮಿಗಳು, ಹೊಸಪೇಟೆ ಜ. ಶ್ರೀ ಶ್ರೀ ಸಂಗನಬಸವ ಸ್ವಾಮಿಗಳು, ಗಂಗಾವತಿ ಕಲ್ಲಮಠದ ಶ್ರೀಗಳು, ಹೆಬ್ಬಾಳ ಬೃಹನ್ಮಠದ ಶ್ರೀಗಳು, ಚಳಗೇರಿ ಶ್ರೀಗಳು, ಬಳಗಾನೂರು ಶ್ರೀಗಳು, ಗೂಡದೂರು ಸುಕ್ಷೇತ್ರ ಶ್ರೀಗಳು, ಅಂಕಲಿಮಠ ಸುಕ್ಷೇತ್ರ ಶ್ರೀಗಳವರು ಉಪಸ್ಥಿತರಿದ್ದರು.




ಕೊಟ್ಟೂರು ಶ್ರೀ ಗವಿಮಠದ ಉಚಿತ ಪ್ರಸಾದ ನಿಲಯದ ಶಂಕು ಸ್ಥಾಪನೆಯನ್ನು ಸಿದ್ಧಗಂಗಾ ಶ್ರೀ ಶ್ರೀಗಳು ನೆರವೇರಿಸಿದರು.



ಕೊಟ್ಟೂರು ಶ್ರೀ ಗವಿಮಠದ ಉಚಿತ ಪ್ರಸಾದ ನಿಲಯದ ಶಂಕು ಸ್ಥಾಪನೆ ನೆರವೇರಿಸಿ ಸಿದ್ಧಗಂಗಾ ಶ್ರೀ ಶ್ರೀಗಳು ಆಶೀರ್ವಚನ ನೀಡುತ್ತಿರುವುದು



ಕೊಟ್ಟೂರು ಶ್ರೀ ಗವಿಮಠದ ಅಪಾರ ಭಕ್ತ ವೃಂದ ಸಿದ್ಧಗಂಗಾ ಶ್ರೀ ಶ್ರೀಗಳವರಿಗೆ ಗೌರವಿಸಿ ಗುರುವಂದನೆ ಸಲ್ಲಿಸಿದರು.




ಮುಖಪುಟ
ಕೊಪ್ಪಳ ಶ್ರೀ ಗವಿಸಿದ್ಧೇಶ್ವರ ಸಂಸ್ಥಾನಮಠದ ಹಿರಿಯ ಶ್ರೀಗಳವರ ೩೮ನೇ ಪುಣ್ಯಾರಾಧನೆ ಹಾಗೂ ನೂತನವಾಗಿ ನಿರ್ಮಿಸುವ ೧೦೦೦ ವಿದ್ಯಾರ್ಥಿಗಳ ವಸತಿ ಹಾಗೂ ಪ್ರಸಾದ ನಿಲಯದ ಶಂಕುಸ್ಥಾಪನೆ ಮತ್ತು ಸಿದ್ಧಗಂಗಾ ಶ್ರೀಗಳವರ ಗುರುವಂದನೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – 572 104.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.5, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – 560 054.
ದೂರವಾಣಿ : 23604087

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೧ ಜುಲೈ ೨೦೦೫ ಸಂಚಿಕೆ : ೭

## ಒಳಪುಟಗಳಲ್ಲಿ..........



| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೧೦೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ಶ್ರೀಮಠದ ಹಳೆಯ ವಿದ್ಯಾರ್ಥಿಗಳಲ್ಲಿ ಮನವಿ....

ಆತ್ಮೀಯರೆ, ನಮಸ್ಕಾರತಮಗೆಲ್ಲ –

ಶ್ರೀ ಮಠದ ಹಳೆಯ ವಿದ್ಯಾರ್ಥಿಬಂಧುಗಳಲ್ಲಿ ಒಂದು ವಿನಮ್ರ ಮನವಿ. ಮೊನ್ನೆ, ದಿನಾಂಕ ೨೮.೬.೨೦೦೫ರಂದು ಶ್ರೀಮಠದಲ್ಲಿ ಹಳೆಮಠದ ಆವರಣದಲ್ಲಿ ಸೂಪರ್‌ವೈಸ್ಥರುಗಳ ಸಭೆಯನ್ನು ಕರೆಯಲಾಗಿತ್ತು. ಪರಮ ಪೂಜ್ಯ ಶ್ರೀಗಳವರು ಸಾನ್ನಿಧ್ಯ ನೀಡಿದ್ದು, ಪೂಜ್ಯ ಕಿರಿಯ ಶ್ರೀಗಳವರು ಉಪಸ್ಥಿತರಿದ್ದರು, ಸನಿವಾಸ ಶಿಕ್ಷಣ ಸಂಸ್ಥೆಗಳ ಮುಖ್ಯಸ್ಥರು, ಶಿಕ್ಷಕ ಶಿಕ್ಷಕೇತರ ಬಂಧುಗಳು, ಆಡಳಿತಾಂಗದ ಆತ್ಮೀಯರು ಸಭೆಯಲ್ಲಿ ಭಾಗವಹಿಸಿದ್ದರು. ಸಂಸ್ಥೆ ಬೃಹದಾಕಾರವಾಗಿ ಬೆಳೆದಿದ್ದು, ಸಮಸ್ಯೆಗಳೂ ಜೊತೆಗೇ ಬೆಳೆಯುತ್ತಿರುವುದನ್ನು ಕುರಿತು ಚರ್ಚೆನಡೆಯಿತು. ಭಾಗವಹಿಸಿದ್ದ ಎಲ್ಲರೂ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಕಳಕಳಿಯಿಂದ ಆಸಕ್ತಿಯನ್ನು ವ್ಯಕ್ತಪಡಿಸಿದ್ದು ನಿಜಕ್ಕೂ ಶ್ರೀಮಠದ ಬಗ್ಗೆ ಅವರಿಗಿರುವ ಅಭಿಮಾನವನ್ನು ತೋರಿಸುತ್ತಿತ್ತು. ಎಂಟು ಸಾವಿರ ವಿದ್ಯಾರ್ಥಿಗಳು ಶ್ರೀಮಠದಲ್ಲಿದ್ದಾರೆ. ಅವರಲ್ಲಿ ತುಂಬ ಕಿರಿಯವಯಸ್ಸಿನ, ಅಂದರೆ ಪ್ರಾಥಮಿಕ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳೂ ಇದ್ದಾರೆ. ಅವರಿಗಿನ್ನೂ ಬಟ್ಟೆ ಹಾಕಿಕೊಳ್ಳುವುದಾಗಲಿ, ಮಲಗುವಾಗ ಹೊದ್ದುಕೊಳ್ಳುವುದಾಗಲಿ, ಶೌಚಾಲಯಗಳನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳುವುದಾಗಲಿ, ಅನಾರೋಗ್ಯವಾದಾಗ ಔಷಧಿ ಸೇವಿಸಬೇಕೆಂಬ ತಿಳಿವಾಗಲಿ ಇಲ್ಲ. ಶ್ರೀಮಠದ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸಿದಾಗ ಎಚ್ಚರವಿದ್ದು ಪ್ರಾರ್ಥನಾ ಗೀತೆಗಳನ್ನು ಹೇಳಬೇಕೆಂಬುದಾಗಲಿ ಗೊತ್ತಿಲ್ಲ. ಅಂಥವರ ಯೋಗಕ್ಷೇಮ ನೋಡಿಕೊಳ್ಳುವ, ಪಾಠಪ್ರವಚನಗಳಲ್ಲಿ ಅವರನ್ನು ತೊಡಗಿಸುವ ಕೈಂಕರ್ಯದಲ್ಲಿ ಶ್ರೀಮಠದ ಶಿಕ್ಷಕ-ಶಿಕ್ಷಕೇತರ ಹಾಗೂ ಆಡಳಿತ ವಿಭಾಗದ ಬಂಧುಗಳ ಶ್ರಮ ಅಪಾರ. ಅವರೆಲ್ಲ ಮುಕ್ತಮನಸ್ಸಿನಿಂದ, ಹೃದಯಾರೆ ಸೇವಾಮುಖಿಗಳಾಗಿದ್ದಾರೆ. ಅವರು ಮಾಡುತ್ತಿರುವ ಸೇವೆ ಶ್ಲಾಘನೀಯ.

ತಾವು ಶ್ರೀಮಠದ ಹಳೆಯ ವಿದ್ಯಾರ್ಥಿಗಳು. ಪರಮಪೂಜ್ಯ ಶ್ರೀಗಳು ಹೇಳುವಂತೆ ಶ್ರೀಮಠದ ಅಮೂಲ್ಯಸಂಪತ್ತು. ಶ್ರೀಗಳವರು ಎಪ್ಪತ್ತೈದು ವರ್ಷಗಳಿಂದ ಶ್ರೀಮಠವನ್ನು ಕಟ್ಟಿದ್ದಾರೆಂಬುದನ್ನು ಬಲ್ಲವರು. ತಾವು ಅವರ ಆಶೀರ್ವಾದದ ನೆರಳಿನಲ್ಲಿ ಬೆಳೆದಿದ್ದೀರಿ. ಸಮಾಜದಲ್ಲಿ ಗೌರವಾನ್ವಿತರಾಗಿ ಮುನ್ನಡೆದಿದ್ದೀರಿ ಎಂಬುದು 'ಸಿದ್ಧಗಂಗಾ'ಕ್ಕೆ ಅಭಿಮಾನದ ವಿಚಾರ. ಈ ಸಂದರ್ಭದಲ್ಲಿ ಶ್ರೀಮಠ ಬೆಳೆದು ನಳನಳಿಸುತ್ತಿರುವ ಸಮಯದಲ್ಲಿ ತಮ್ಮ ಸೇವೆ ಸಹಕಾರ ಶ್ರಮದಾನದ ರೂಪದಲ್ಲಿ ಅಗತ್ಯವಿದೆ. ಶ್ರೀಮಠ ನೈರ್ಮಲ್ಯ ರಕ್ಷಣೆಗಾಗಿ ತುಂಬಾ ಶ್ರಮಿಸುತ್ತಿದೆ. ಸ್ವತಃ ಶ್ರೀಗಳೂ ಕಿರಿಯ ಶ್ರೀಗಳೂ ಸೇರಿದಂತೆ ಎಲ್ಲರೂ ನಿಗಾ ವಹಿಸುತ್ತಿದ್ದಾರೆ. ಆದರೂ ಇನ್ನೂ ಹೆಚ್ಚು ಸಮರ್ಪಕತೆಗಾಗಿ ಎಲ್ಲರೂ ಚಿಂತನೆ ನಡೆಸಿದ್ದಾರೆ. ಯೋಜನೆಗಳನ್ನು ರೂಪಿಸುತ್ತಿದ್ದಾರೆ. ತಾವು ಹೆಚ್ಚೇನು ಮಾಡಬೇಕಾಗಿಲ್ಲ. ಶ್ರೀಮಠದ'ನೈರ್ಮಲ್ಯ' ವ್ಯವಸ್ಥೆಯಲ್ಲಿ ಮುಂದೆ ಬಂದರೆ ಬಹುದೊಡ್ಡ ಉಪಕಾರವಾದೀತು. ಮಾಡಬೇಕಾದುದಿಷ್ಟೆ, ನೂರು ಅಥವ ಐವತ್ತುಮಂದಿ ಹಳೆಯ ವಿದ್ಯಾರ್ಥಿಗಳಾದ ತಾವು ವಾರಕ್ಕೊಮ್ಮೆ ಭಾನುವಾರದಂದು ಶ್ರೀಮಠದಲ್ಲಿ ಸಮಾವೇಶಗೊಂಡು ಶ್ರೀಮಠದ ಆವರಣವನ್ನೆಲ್ಲಾ ಸ್ವಚ್ಛಗೊಳಿಸುವ ಶ್ರಮದಾಸೋಹದ ಮೂಲಕ ಸಂಸ್ಥೆಯನ್ನು ಆದರ್ಶದ 'ಸೇವಾಧಾಮ'ವನ್ನಾಗಿ, 'ಮಹಾಮನೆ'ಯನ್ನಾಗಿ ನಿರ್ಮಾಣಮಾಡುವ ಕೈಂಕರ್ಯದಲ್ಲಿ ತೊಡಗುತ್ತೀರಿ ಎಂದು "ಸಿದ್ಧಗಂಗಾ" ಆಶಿಸುತ್ತದೆ. ಇದು ತಂಡ ತಂಡವಾಗಿ ಆಗಬೇಕು. ಈ ಹಿಂದೆ ಶ್ರೀ ಟಿ.ಕೆ. ನಂಜುಂಡಪ್ಪನವರ ನೇತೃತ್ವದಲ್ಲಿ "ಕಾಯಕದಳ" ಅಘೋಷಿತ ಹೆಸರಿನಲ್ಲಿ ಈ ಕೆಲಸ ನಡೆಯುತ್ತಿತ್ತು. ಅದು ನಿಂತು ಹೋದದ್ದು ತುಂಬಲಾರದ ನಷ್ಟ. ಅದನ್ನಿಲ್ಲಿ ಸ್ಮರಿಸುತ್ತಿದೆ ಪತ್ರಿಕೆ.

ಶ್ರೀಮಠದ ಆಶ್ರಯದಲ್ಲಿ ನಡೆಯುತ್ತಿರುವ ತುಮಕೂರಿನಲ್ಲಿರುವ ಶಾಲಾ-ಕಾಲೇಜುಗಳಲ್ಲಿ ಸೇವೆಸಲ್ಲಿಸುತ್ತಿರುವ ಅಧ್ಯಾಪಕ, ಪ್ರಾಧ್ಯಾಪಕ, ಅಧ್ಯಾಪಕೇತರ ಬಂಧುಗಳು ಶ್ರೀಮಠದಲ್ಲಿ ನಡೆಯುತ್ತಿರುವ ಸಾಮೂಹಿಕ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸುವುದರ ಮೂಲಕ, ಹಿರಿ-ಕಿರಿಯ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವ ಸಹಕಾರವನ್ನು ಭಾನುವಾರದ ಬಿಡುವಿನ ದಿನದಲ್ಲಿಯಾದರೂ ನೀಡುತ್ತಾರೆಂದು 'ಸಿದ್ಧಗಂಗಾ' ಆಶಿಸುತ್ತದೆ. ಅದರಿಂದ ಮಾತೃಸಂಸ್ಥೆಯೊಂದಿಗೆ ಬಾಂಧವ್ಯ ಬೆಳೆದು ಬರುವಂತಾಗುತ್ತದೆ.

ಶ್ರೀ ಸಿದ್ಧಗಂಗಾ ಮಠದ ಸೇವೆಯ ಆದರ್ಶಪೂರ್ಣ ಶ್ರೇಷ್ಠತೆಗಾಗಿ ಅಭಿಮಾನಿಗಳು, ಹಿತೈಷಿಗಳು ಎಲ್ಲರ ಸಹಕಾರ-ಸಕ್ರಿಯಾತ್ಮಕವಾಗಿ ಒದಗಿ ಬರಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

– ಸಂಪಾದಕ







## ಮೂರು ವರ್ಗದ ಜನರು

ಕವಿಭರ್ತೃಹರಿ ತನ್ನೊಂದು ಶ್ಲೋಕದಲ್ಲಿ ಮೂರುವರ್ಗದ ಜನರ ಲಕ್ಷಣವನ್ನು ತಿಳಿಸುತ್ತಾನೆ. ಎಲ್ಲ ಸೌಲಭ್ಯಗಳಿದ್ದರೂ, ಎಲ್ಲ ಅವಕಾಶಗಳಿದ್ದರೂ, ಎಲ್ಲ ಅವಕಾಶಗಳು ಒದಗಿಬಂದರೂ, ಅಂತಹ ಅವಕಾಶ ಸೌಲಭ್ಯಗಳನ್ನು ಸದುಪಯೋಗಪಡಿಸಿಕೊಳ್ಳದೆ, ಜೀವನವನ್ನು ವ್ಯರ್ಥಮಾಡಿಕೊಳ್ಳುವವರು ಒಂದು ವರ್ಗ. ತಾವೂ ಸಾರ್ಥಕತೆಯ ಜೀವನವನ್ನು ನಡೆಸಲಾರರು, ಇತರರಿಗೂ ಉಪಕಾರ ಮಾಡಲಾರರು. ಬರಿದೆ ಕಾಲಹರಣ ಮಾಡುತ್ತ ನಿಷ್ಕ್ರಿಯಾತ್ಮಕರೆನಿಸುತ್ತಾರೆ. ತಾವೂ ಬಾಳಲಾರರು; ಬೇರೆಯವರನ್ನೂ ಬಾಳಲು ಬಿಡಲಾರರು. ಕನಿಷ್ಠರೆನಿಸಿಕೊಳ್ಳುವ ವರ್ಗದವರು.

ಒದಗಿದ ಅವಕಾಶಗಳನ್ನು, ಲಭ್ಯವಾದ ಸೌಲಭ್ಯಗಳನ್ನು ಆರಂಭದಲ್ಲಿ ಬಹು ಉತ್ಸಾಹದಿಂದ ಬಳಸಿಕೊಳ್ಳಲು ತೊಡಗಿ, ಕ್ರಮೇಣ ನಿರುತ್ಸಾಹಿಗಳಾಗುತ್ತ ಕೈಕೊಂಡ ಕೆಲಸಕಾರ್ಯಗಳನ್ನು ಪೂರ್ಣಗೊಳಿಸಲಾರದೆ ಅರ್ಧಕ್ಕೇ ಬಿಡುವಂಥವರು. 'ಬರಬರುತ್ತ ಭಕ್ತಿ ಅರೆಯಾಯಿತ್ತು ಕಾಣಿರಣ್ಣಾ' ಎಂಬ ಅಣ್ಣನವರ ವಾಣಿಯಂತೆ ಅರೆ ಸಂಕಲ್ಪಚಿತ್ತರಿವರು. ಇಂಥವರಿಂದಲೂ ಪ್ರಯೋಜನವಿಲ್ಲ. ಎರಡನೆಯ ವರ್ಗದವರಿವರು – ಮಧ್ಯಮರೆನಿಸುತ್ತಾರೆ.

ಎಷ್ಟೇ ವಿಘ್ನ ಪರಂಪರೆಗಳು ಎದುರಾದರು, ಪ್ರಾಣಾಪಾಯಗಳು ತಲೆದೋರಿದರೂ ಧ್ಯೇಯವಿಮುಖರಾಗದಂತೆ ಗುರಿಮುಟ್ಟುವತನಕ ಎಚ್ಚರದಿಂದ ಮುಂದುವರೆಯುವ ಧೀರೋದಾತ್ತ ಸ್ವಭಾವದ ವರ್ಗದವರು ಮೂರನೆಯ ವರ್ಗಕ್ಕೆ ಸೇರುತ್ತಾರೆ. ಇವರು ಸಾಹಸಿಗಳು, ಸದಾ ಉತ್ಸಾಹಿಗಳು, ಸೋಲನ್ನರಿಯದ ವೀರರು. ಹಸಿವು, ತೃಷೆ, ಭಯ, ಸದ್ದುಗದ್ದಲಗಳಿಗೆ ಹೆದರದವರು. ಭಯ ಭಕ್ತಿಯುಳ್ಳವರು, ಉತ್ತಮ ವರ್ಗದವರು. ಇವರು 'ಕಾಮಾತುರ'ರಲ್ಲ; 'ವಿದ್ಯಾತುರರು'.

ವಿದ್ಯಾರ್ಥಿಗಳು ಸದಾ ವಿದ್ಯಾತುರರಾಗಬೇಕು. 'ವಿದ್ಯಾತುರಾಣಾಂ ನ ನಿದ್ರಾ, ನ ಸುಖಾ' ಎನ್ನುತ್ತದೆ ಋಷಿವಾಣಿ – ವಿದ್ಯೆಬೇಕೆಂಬುವನಿಗೆ ನಿದ್ರೆಯಮೇಲೆ ಆಸೆಯಿರುವುದಿಲ್ಲ, ಸುಖವನ್ನು ಅಪೇಕ್ಷಿಸುವುದಿಲ್ಲ. ನಿದ್ರೆ ವಿದ್ಯೆಯ ಶತ್ರು. ಸುಖ ವಿದ್ಯೆಯ ವೈರಿ. ನಿದ್ರೆಯಿಂದ ಮರೆವು. ಸುಖದಿಂದ ವಿವೇಕದೂರ. ನಿದ್ರೆ ಕ್ಷಣಿಕ ಸಾವು. ಸುಖ ಕ್ಷಣಿಕ ಸಂತೋಷ. ವಿದ್ಯೆ ವಿನಯಕ್ಕೆ ಏಣಿ. ಜೀವನದ ದೋಣಿ. ವಿದ್ಯಾವಂತನಾದವನು ವಿನಯಶೀಲನಾಗಿರಬೇಕು. ಅಶಕ್ತರನ್ನು, ಅನಾಥರನ್ನು, ಅಸಹಾಯಕರನ್ನು ಕಂಡಾಗ ಉದಾರವಾಗಿ ನಡೆದುಕೊಳ್ಳಬೇಕು. ಅದು ವಿದ್ಯಾವಂತರ ಲಕ್ಷಣ. ಆದರೆ ಇಂದು ವಿದ್ಯಾವಂತರೆನಿಸಿಕೊಂಡವರೇ ಹೆಚ್ಚು ಸಮಾಜದಲ್ಲಿ ಹಲವು ಹನ್ನೊಂದು ಸಮಸ್ಯೆಗಳಿಗೆ ಕಾರಣವಾಗುತ್ತಿದ್ದಾರೆ. ವಿದ್ಯಾರ್ಥಿಗಳಂತೂ ಹೆತ್ತು-ಹೊತ್ತವರಿಗೆ ಧರ್ಮಸಂಕಟವನ್ನುಂಟು ಮಾಡುತ್ತಿದ್ದಾರೆ. ಇತ್ತ ವಿದ್ಯಾಭ್ಯಾಸದಲ್ಲಿ ಶ್ರದ್ಧೆಯನ್ನು ವಹಿಸುತ್ತಿಲ್ಲ. ಅತ್ತ ಮನೆಯ ಜವಾಬ್ದಾರಿಯನ್ನು ಅರ್ಥಮಾಡಿಕೊಳ್ಳುತ್ತಿಲ್ಲ. ಅಕ್ಷರಜ್ಞಾನ ಅಹಂಕಾರಕ್ಕೆ ದಾರಿಮಾಡಿಕೊಡುವಂತಾಗಿದ್ದೇ

ವಿದ್ಯಾರ್ಥಿನಿಲಯಗಳಿರುವುದು ವಿದ್ಯಾರ್ಥಿಗಳಿಗಾಗಿ, ವಿದ್ಯಾರ್ಥಿಗಳು ವಿದ್ಯಾರ್ಥಿನಿಲಯಗಳಲ್ಲಿರುವಾಗ ಸನ್ನಡತೆ, ಸದ್ವಿಚಾರಗಳನ್ನು ಪಾಲಿಸಬೇಕು. ಅದರಲ್ಲೂ ಉಚಿತ ವಿದ್ಯಾರ್ಥಿನಿಲಗಳಲ್ಲಿ, ಮಠಮಾನ್ಯಗಳಲ್ಲಿ, ಸಂಸ್ಥೆಗಳಲ್ಲಿ ಆಶ್ರಯ ಪಡೆದಮೇಲೆ ಅಲ್ಲಿನ ನಿಯಮ ನಿಬಂಧನೆಗಳಿಗೆ ಬದ್ಧರಾಗಿರಬೇಕು. ಯಾವುದೇ ಮಠಗಳಾಗಲಿ ವಿದ್ಯಾರ್ಥಿಗಳಿಗೆ ಆಶ್ರಯನೀಡುತ್ತಾ ಬಂದಿರುವುದು ಕಲ್ಯಾಣದೃಷ್ಟಿಯಿಂದ. ಆ ಆಶ್ರಯದ ಫಲಾನುಭವಿಗಳು ಸಂಸ್ಥೆಯ ಔದಾರ್ಯವನ್ನು, ಶ್ರಮವನ್ನು ಅರ್ಥಮಾಡಿಕೊಳ್ಳಬೇಕು. ವಿದ್ಯಾರ್ಥಿಗಳಿಂದ ಸಂಸ್ಥೆಗೆ ಯಾವ ರೀತಿಯಲ್ಲೂ ಅಪಚಾರವಾಗದಂತೆ, ಅಪವಾದ ಬರದಂತೆ ನಡೆದುಕೊಳ್ಳಬೇಕೆಂದು ಸಂಸ್ಥೆ ಅಪೇಕ್ಷಿಸುವುದು ಸಹಜ. ಇಂದಿನ ಯುವಜನಾಂಗ ಒಂದು ತುತ್ತು ಅನ್ನದ ಅರಿವಿರದಂತೆ, ಆ ಒಂದು ತುತ್ತಿನ ಹಿಂದೆ ಅದೆಷ್ಟು ಜನದ ಶ್ರಮದ ಬೆವರು ಇದೆ ಎಂಬುದರ ಅರಿವಿಲ್ಲದೆ ನಡೆದುಕೊಳ್ಳುತ್ತಿರುವುದನ್ನು ಕಂಡಾಗ ತುಂಬ ನೋವಾಗುತ್ತದೆ. ಸರ್ಕಾರ, ಸಮಾಜ, ಪೋಷಕರು ಶ್ರಮಗಾಗಿ ಪಡುತ್ತಿರುವ ಶ್ರಮದ ಅರಿವಿಲ್ಲದೆ ಜೀವನವನ್ನೇ 'ಬಿಳಿಮೋಡ'ಗಳನ್ನಾಗಿಸಿಕೊಳ್ಳುತ್ತಿರುವುದು ದುರ್ದೈವವೆನ್ನಬೇಕಾಗಿದೆ.

'ಶ್ರದ್ಧಾವಾನ್ ಲಭತೇ ವಿದ್ಯಾ' – ಎಂಬಂತೆ, ಶ್ರದ್ಧೆಯಿಲ್ಲದೆ ವಿದ್ಯೆಬರದು. ಒಳ್ಳೆಯ ವಿದ್ಯಾವಂತ ಯಾವುದೇ ಮನೆಯ, ಸಂಸ್ಥೆಯ, ಸಮಾಜದ, ದೇಶದ ಆಸ್ತಿ ಎಂಬುದು ಮರೆಯಲಾಗದು.

*

ಓಂ



# ಶ್ರೀ ಸಿದ್ಧಲಿಂಗೇಶ್ವರ ವಚನ

*ಮುಂದಳ ಮುಖಸಾಲೆಯಲ್ಲಿ ಉದ್ದಂಡ ಮೂರ್ತಿಯ ಕಂಡೆನಯ್ಯಾ*
*ಲಂಡರ ಫುಂಡರ ದಂಡಿಸುತ್ತಿದ್ದಾನೆ ನೋಡಾ*
*ಮುಂದಳ ಮುಖಸಾಲೆಯ ಮುರಿದು*
*ಉದ್ದಂಡಮೂರ್ತಿ ಉಳಿದ ಪ್ರಚಂಡತೆಯನೇನೆಂಬೆನಯ್ಯಾ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ.*

ದೇಹವೆಂಬ ದೇವಾಲಯ, ಬಾಹ್ಯ ಹೃದಯ ಪೀಠವೆಂಬ ಚಂದ್ರಶಾಲೆ. ಅಲ್ಲಿ ಮೂರ್ತಿಗೊಂಡಿರುವ ಇಷ್ಟಲಿಂಗ. ಆ ಇಷ್ಟಲಿಂಗ ದೇವನನ್ನು ಶ್ರೀಗುರುವಿನ ದೀಕ್ಷಾತ್ರಯದಿಂದ ನಿದರ್ಶನನಾಗಿದ್ದಾನೆ ಶಿವಶರಣನು. ಆ ಇಷ್ಟಲಿಂಗದೇವನು ದೇಹ, ಪ್ರಾಣ, ಆತ್ಮರುಗಳ ಕೂಡಿ ವರ್ತಿಸುತ್ತ ವಿಶ್ವೈಜಸಪ್ರಾಜ್ಞ ಜೀವರನ್ನು ಜನನಮರಣಗಳಲ್ಲಿ ಪೀಡಿಸುತ್ತಿದ್ದಾನೆ. ಆ ಪರಶಿವಲಿಂಗವು ಶರಣನ ದೇಹಸಂಬಂಧವಾದ ಇಂದ್ರಿಯಗಳ ವರ್ತನೆಯನ್ನು ಬಿಡಿಸಿ ಸರ್ವಾಂಗಲಿಂಗವಾಗಿ ನೆಲೆಗೊಂಡಜ್ಞಾನ ಪ್ರಭಾವನಾಗಿದ್ದು – ಅನುಪಮನೆನಿಸಿದ್ದಾನೆ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀವಾಣಿ

ವಿದ್ಯಾರ್ಥಿಗಳು ನಿರರ್ಥಕವಾಗಿ ಕಾಲ ಕಳೆಯುತ್ತಾರೆ. ಅವರು ಹೆಚ್ಚು ಕಾಲ ಕಾಡು ಹರಟೆಯಲ್ಲಿ ವ್ಯಯವಾಗುತ್ತದೆ. ಬದಲಾಗಿ ಅದೇ ಕಾಲವನ್ನು ಒಂದು ಉತ್ತಮ ಶ್ಲೋಕ, ಒಂದು ಒಳ್ಳೆ ಮಾತು, ಒಂದು ಒಳ್ಳೆ ವಾಕ್ಯವನ್ನು ಕಂಠಪಾಠ ಮಾಡಿದರೆ ಬದುಕಿನುದ್ದಕ್ಕೂ ಅದು ದಾರಿ ದೀಪವಾಗುತ್ತದೆ. ಪ್ರತಿಕ್ಷಣವೂ ನಮ್ಮ ಜೀವನಕ್ಕೆ ಏನಾದರೊಂದು ಕಾಣಿಕೆ, ಶ್ರೇಯಸ್ಸನ್ನ ಕೊಟ್ಟು ಹೋಗಬೇಕು.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಸಂಜೆ ಮುಂಜಾನೆಯಲಿ ಲಿಂಗಪೂಜೆಯಮಾಡಿ
ಅಂಗಜ ಹರನಿಗೆ ಪ್ರಿಯನಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾವಿರದ ಮಕ್ಕಳಿಗೆ ಸಾವಿರದ ರೀತಿಯಲಿ
ಸಾವಿರದ ನುಡಿಗಳ ಕಲಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚೈತ್ರವೈಶಾಖದಲಿ ಗಿಡಮರ ನಗುವಂತೆ
ಪಾತ್ರವರಿತು ನದಿಹರಿವಂತೆ । ನಗುತಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೆಲಕೆ ಅದ್ಭುತವಾದೆ ಜಗಕೆ ಸೋಜಿಗವಾದೆ
ಇಹದ ಬಾಳಿಗೆ ಸೊಗದ ಜೇನಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯಾರೇನ ಹೇಳಲಿ? ಯಾರೇನ ನುಡಿಯಲಿ?
ಯಾರು ಸಮರಯ್ಯ ನಿನಗಿನ್ನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಲ್ಲುಮಣ್ಣನು ಹೊತ್ತೆ ಹುಲ್ಲು ಹೊರೆಯನು ಹೊತ್ತೆ
ಒಲೆನೋಡಿ ಹಿಟ್ಟ ತಿರುವಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬುದ್ಧ ನಿನ್ನೊಳಗಿಹನು ಬಸವ ನಿನ್ನೊಳಗಿಹನು
ಅರವಿಂದ ಗಾಂಧಿ ನಿನ್ನೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿವ ಮಾತುಗಳಲ್ಲಿ ದೇಶ ಚಿಂತನೆ ಹರಳು
ನಡೆವ ಹೆಜ್ಜೆಗಳಲ್ಲಿ ಶಿವ ನೆರಳು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾವಿ ಕಾಯಕವಾಗಿ ಕಾವಿ ಕಲ್ಯಾಣವಾಗಿ
ಕಾವಿ ತನ್ನರಿವಿನಗುರಿಗಾಗಿ । ಎನುತಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಗ ಲಿಂಗವಸ್ಥೈದೆ ಲಿಂಗ ಜಂಗಮಸ್ಥೈದೆ
ಲಿಂಗ ಜಂಗಮದ ಸಮಸ್ಥೈದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಧಾರ್ಮಿಕ ಕ್ರಾಂತಿ

ಭಾಗ – ೬

– ದೇಜಗೌ
ವಿಶ್ರಾಂತ ಕುಲಪತಿಗಳು,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಬಸವಣ್ಣನವರು ಬದುಕಿದ್ದು ಕೇವಲ ಮೂವತ್ತಾರು ವರ್ಷ. ಅಷ್ಟು ಅಲ್ಪಾವಧಿಯಲ್ಲಿ ಅವರಂತೆ ವೈವಿಧ್ಯಮಯವಾದ ಬದುಕನ್ನು ನಡೆಸಿ, ಸಮಾಜದ ಸಮಸ್ತ ಮುಖಗಳನ್ನು ತನ್ನ ತೋಳ್ತೆಕ್ಕೆಯಲ್ಲಪ್ಪಿಕೊಳ್ಳುವಂಥ ಸಮಗ್ರ ಕ್ರಾಂತಿ ನಿರ್ವಹಿಸಿದ್ದು ಜಗತ್ತಿನ ಅದ್ಭುತಗಳಲ್ಲೊಂದೆಂದೇ ಹೇಳಬಹುದು. ಲೋಕಚರಿತ್ರೆ ಅನೇಕ ಕ್ರಾಂತಿಗಳನ್ನು ಗುರುತಿಸಿದೆ. ನಿಜ, ಆ ಒಂದೊಂದು ಕ್ರಾಂತಿಯೂ ಏಕಮುಖವಾದದ್ದು. ಇತ್ತೀಚೆಗೆ ಭಾರತದಲ್ಲಿ ಕೇಳಿಬರುತ್ತಿರುವ ಸಮಗ್ರ ಕ್ರಾಂತಿಯ ಕಲ್ಪನೆ ಹನ್ನೆರಡನೆಯ ಶತಮಾನದಷ್ಟು ಪ್ರಾಚೀನವಾದದ್ದೆಂಬುದನ್ನು ಜ್ಞಾಪಿಸಿಕೊಳ್ಳಬೇಕಾಗಿದೆ. ಅಧ್ಯಾತ್ಮ ಸಿದ್ಧಿಯ ಪರಾಕಾಷ್ಠೆಯನ್ನು ಮುಟ್ಟಿದ ಸಂತರು ಅಪಾರ ಸಂಖ್ಯೆಯಲ್ಲಿ ಆಗಿಹೋಗಿದ್ದಾರೆ. ಧಾರ್ಮಿಕ ಕ್ಷೇತ್ರದಲ್ಲಿ ಸಂಪ್ರದಾಯಕ್ಕೆ ವಿರುದ್ಧವಾಗಿ ಸೆಟೆದದ್ದು ನಿಂತು, ಪ್ರತಿಭಟನಾರ್ಥವಾಗಿ ನೂತನ ಮತವನ್ನು ಸ್ಥಾಪಿಸಿದ ಆಚಾರ್ಯರಿದ್ದಾರೆ ; ಸಮಾಜ ಸುಧಾರಣೆಗಾಗಿ ಹುತಾತ್ಮರಾದ ಸಮಾಜ ಸುಧಾರಕರಿದ್ದಾರೆ ; ರಾಜಕೀಯಾರ್ಥಿಕ ಕ್ಷೇತ್ರಗಳಲ್ಲಿ ಬಿರುಗಾಳಿಯಾಗಿ ಬೀಸಿ, ಪರಿಸ್ಥಿತಿಯನ್ನೇ ತಲೆಕೆಳಗು ಮಾಡಿದ ಪ್ರಚಂಡ ವೀರರಿದ್ದಾರೆ ; ಸಾಂಸ್ಕೃತಿಕ ಕ್ಷೇತ್ರದಲ್ಲಿ, ಅದರಲ್ಲಿಯೂ ಸಾಹಿತ್ಯ ಭೂಮಿಕೆಯಲ್ಲಿ ಅತ್ಯಂತ ಪರಿಣಾಮಕಾರಿಯಾದ ಪರಿವರ್ತನೆಗೆ ಕಾರಣರಾದ ಪ್ರತಿಭಾವಂತರಿದ್ದಾರೆ. ಆದರೆ ಮಾನವನ ಇಡೀ ಬದುಕನ್ನು ಮುಟ್ಟುವಂಥ ಸಮಗ್ರ ಕ್ರಾಂತಿಗೆ ಬುನಾದಿ ಹಾಕಿದ ಅಸಾಧಾರಣ ವ್ಯಕ್ತಿಯೆಂದರೆ ಬಸವಣ್ಣನವರು.

ಅವರು ಹಿಮಾಲಯದ ನಿರ್ಜನಾರಣ್ಯದಲ್ಲಿ ಮೂಗು ಹಿಡಿದು ಕುಳಿತುಕೊಳ್ಳದೆಯೆ, ನದೀ ತೀರದ ದೇವಾಲಯವೊಂದರ ಆವಾರದಲ್ಲಿ ಜನಸಂದಣಿಯ ನಡುವೆ ತಪೋಮಗ್ನರಾಗಿ ಶಿವಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ತಾವು ಕಂಡ ಸತ್ಯದ ಬೆಳಕನ್ನು ತಮಗಾಗಿ ತಮ್ಮವರಿಗಾಗಿ ದುರ್ಗಮವಾದ ಭಾಷೆಯಲ್ಲಿ ಬಚ್ಚಿಟ್ಟುಕೊಳ್ಳದೆ ಶ್ರೀ ಸಾಮಾನ್ಯನಿಗೂ ಎಟುಕುವ ರೀತಿಯಲ್ಲಿ ಜನವಾಣಿಯ ಮೂಲಕ ಹಂಚುತ್ತಾರೆ. ವ್ಯಾಖ್ಯಾನ ಭಾಷ್ಯಗಳನ್ನು ಬರೆದು, ಸತ್ಯವನ್ನು ಮುಚ್ಚಿಡದೆ, ಕಗ್ಗಂಟುಗಳನ್ನು ಸೃಷ್ಟಿಸದೆ, ವಿರೋಧಾಭಾಸಗಳನ್ನು ನೇಯ್ದು ಗೊಂದಲವುಂಟುಮಾಡದೆ, ಕೆಲವೇ ಕೆಲವು ಲಲಿತ ಸರಳ ವಚನಗಳಲ್ಲಿ ಗೀತೋಪನಿಷತ್ತುಗಳ ಸಾರವನ್ನು, ತಾವು ಕಂಡುಂಡ ವಿಶ್ವಸತ್ಯಗಳನ್ನು ಹಾಗೂ ಜೀವನ ಮೌಲ್ಯಗಳನ್ನು ಮುಪ್ಪಿಗ್ರಾಹ್ಯವಾಗುವಂತೆ, ನೇರವಾಗಿ ಹೃದಯವನ್ನು ಹೋಗುವಂತೆ ವಿವರಿಸಿದ್ದಾರೆ. ಅವರು ಸಹ್ಯಾದ್ರಿಯಿಂದ ಹಿಮಾದ್ರಿಯವರೆಗೆ ಪರ್ಯಟನ ಮಾಡದೆಯೇ, ಕನ್ನಡ ನಾಡಿನ ಮೂಲೆಯೊಂದರಲ್ಲಿ ಕುಳಿತು, ತಾವಿದ್ದೆಡೆಯೇ ಸರ್ವಾಕರ್ಷಕ ಕೇಂದ್ರವಾಗಿ, ಸೂರ್ಯಮಂಡಲವಾಗಿ, ರಾಷ್ಟ್ರಕುಂಡಲಿಯನ್ನೆಚ್ಚರಿಸಲು ರಾಷ್ಟ್ರಕಲ್ಯಾಣವನ್ನು ಸಾಧಿಸಲು, ತಮ್ಮ ತಪಶಕ್ತಿಯನ್ನೆಲ್ಲ ಧಾರೆಯೆರೆಯುತ್ತಾರೆ.

ಸಾಮಾಜಿಕ ಕ್ರಾಂತಿಯ ನೆಲಗಟ್ಟನ್ನಾಶ್ರಯಿಸಿದ ರಾಜಕೀಯ ಕ್ರಾಂತಿ ಕ್ಷಿಪ್ರವಾಗಿ ವಿಫಲಗೊಳ್ಳುತ್ತದೆಂದು ರಾಜನೀತಿ ದುರಂಧರ ಡಾ. ಅಂಬೇಡ್ಕರರು ಮೇಲಿಂದ ಮೇಲೆ ಒತ್ತಿ ಹೇಳುತ್ತಾರೆ. ಧರ್ಮದ ಅಡಿಗಲ್ಲಿನ ಮೇಲೆ ನೆಲೆಗೊಳ್ಳದ ರಾಜಕೀಯ ಸೌಧ ಬಹು ಬೇಗನೆ ಮುರಿದು ಬೀಳುತ್ತದೆಂದು ಗಾಂಧೀಜಿ ಸಾರಿ ಸಾರಿ ಹೇಳಿದ್ದಾರೆ. ಸರ್ವಯೋಗ ಸಮನ್ವಯ ಪ್ರಯತ್ನ ನಡೆಸಿದಂತೆ, ಬಸವಣ್ಣನವರು ಈ ಕ್ಷೇತ್ರತ್ರಯಗಳ ಸಮನ್ವಯಕ್ಕೂ ಹೋರಾಟ ನಡೆಸಿದ್ದಾರೆ. ಭರತಖಂಡದ ಪರಿಸ್ಥಿತಿಯಲ್ಲಿ ಧಾರ್ಮಿಕ ಕ್ರಾಂತಿಯಾಗದೆ ಸಾಮಾಜಿಕ ಕ್ರಾಂತಿ ಸಾಧ್ಯವಿಲ್ಲವೆಂದೂ, ಆ ಎರಡು ಕ್ರಾಂತಿಗಳು ಯಶಸ್ವಿಯಾದಾಗ ಮಾತ್ರ ರಾಜಕೀಯಾರ್ಥಿಕ ಕ್ರಾಂತಿ ಸುಲಭವಾಗುತ್ತದೆಂದೂ ಮನಗಂಡ ಭಾರತೀಯರಲ್ಲಿ ಅವರೇ ಪ್ರಪ್ರಥಮರು. ಮತದ ಹೆಸರಿನಲ್ಲಿ ಚಾಲ್ತಿಯಲ್ಲಿರುವ ಧರ್ಮ ಮಾನವ ಜೀವನ ಮಾತ್ರವಲ್ಲ, ಇಡೀ ಸಮಾಜವನ್ನೇ ರೂಪಿಸುತ್ತದೆ ಮತ್ತು ನಿಯಂತ್ರಿಸುತ್ತದೆಂಬುದು ಸರ್ವಜನವೇದ್ಯವಾದ ಸಂಗತಿ. ಅರಿತೋ ಅರಿಯದೆಯೋ, ಅನೇಕ ವೇಳೆ ವಿಚಾರಿಸದೆಯೆ, ಮನುಷ್ಯ ಸಂಪ್ರದಾಯಬದ್ಧವಾದ ಧರ್ಮವನ್ನು ಮೂಕನಂತೆ ಪಾಲಿಸುತ್ತಾನೆ. ತಾನು ಹಿಂದುವೆ ? ಕ್ರಿಸ್ತೀಯನೆ ? ಹಾಗೆಂದರೇನು ? ತಾನು ಅನುಸರಿಸುತ್ತಿರುವ ರೂಢಿ ಸಂಪ್ರದಾಯಗಳು ಮೌಢ್ಯಮೂಲವಾದುವೆ ? ಅವುಗಳಿಂದ ತನ್ನ ಜೀವನಕ್ಕೆ ಬೆಳಕು ದೊರೆಯುತ್ತದೆಯೆ ? ತಾನು ಸಲ್ಲಿಸುತ್ತಿರುವ ಪೂಜೆಯ ಅರ್ಥ ಮಹತ್ವಗಳೇನು ? ಇಂಥ ನೂರಾರು ಪ್ರಶ್ನೆಗಳು ಅವನ ತಲೆಯಲ್ಲಿ ಮೂಡುವಂತಿಲ್ಲ ; ಮೂಡಿದರೂ ಸಮಾಜದ, ಅಥವಾ ದೈವದ ಕೋಪಕ್ಕೆ ಹೆದರಿ ತುಟಿ ಬಿಗಿಹಿಡಿದುಕೊಂಡಿರುತ್ತಾನೆ ; ಅಂಥ ಪ್ರಶ್ನೆಯ ಕಲ್ಪನೆಯೇ ಪಾಪಕರ್ಮವೆಂದು ಅವನು ತಿಳಿದಿರುತ್ತಾನೆ. ಮಾನವನ ಮಹತಿಗೆ ಹಾಗೂ ಲೋಕದ ಪ್ರಗತಿಗೆ ಜ್ಞಾನ ವಿಜ್ಞಾನಗಳೇ ಪ್ರಮುಖ ಸಾಧನಗಳು. ಅವೇ ಸತ್ಯ, ಮಾನವನ ಬಾಳ್ವೆಯ ಗುರಿ. ಅವು ವಿಕಾಸಗೊಂಡಂತೆ ಅವನ ಚಟುವಟಿಕೆ ಹಾಗೂ ಜೀವನ ಮೌಲ್ಯಗಳೆಲ್ಲ ಅವುಗಳಿಗನುಗುಣವಾಗಿ ಪರಿವರ್ತನೆಗೊಳ್ಳಬೇಕೆಂಬ ಚಿರಂತನ ತತ್ವವನ್ನು ಮರೆತಾಗಲೇ ಅವನ ಪತನ ಪ್ರಾರಂಭವಾಗುತ್ತದೆ. ಅವನು ಮರೆಯುವುದಿರಲಿ, ಅದನ್ನು ಮರೆಸುವುದಕ್ಕೆ ಸಂಪ್ರದಾಯ ಜಡರೂ, ಮೌಢ್ಯಜನಕರೂ, ಪ್ರಗತಿವಿರೋಧಿಗಳೂ, ಪಟ್ಟಭದ್ರಹಿತಾಸಕ್ತರೂ ಆದ ಪೈಶಾಚಿಕ ಶಕ್ತಿಗಳು ಭಯಾನಕ ರೀತಿಯಲ್ಲಿ ಪ್ರಯತ್ನಿಸುತ್ತವೆ. ವಿದೇಶೀಯರ ಆಕ್ರಮಣಕ್ಕೆ ಹಾಗೂ ನಾಡಿನ ನೈತಿಕ ಪತನಕ್ಕೆ ವಿಚಾರ ಸ್ವಾತಂತ್ರ್ಯವನ್ನು ಅಪಹರಿಸಿದ, ಶ್ರೀಸಾಮಾನ್ಯನನ್ನು ಅಜ್ಞಾನದ ಅಂಧಕಾರಕ್ಕೆ ನೂಕಿದ, ತಾರತಮ್ಯ ತತ್ವದ ಆಧಾರದ ಮೇಲೆ ಜಾತಿಮತ ವರ್ಣಗಳನ್ನು ಸೃಷ್ಟಿಸಿದ ಅವೈಜ್ಞಾನಿಕ ಸಿದ್ಧಾಂತಗಳೇ ಕಾರಣವಾಗಿವೆ.

'ಧರ್ಮ' ಬಹುವ್ಯಾಪಕವಾದ ಪದ. ಧರ್ಮೋ ರಕ್ಷತಿ ರಕ್ಷಿತಃ. ಶಾಶ್ವತ ಮೌಲ್ಯಗಳು ಅಲ್ಪಪ್ರಮಾಣದಲ್ಲಿದ್ದು, ಮೌಢ್ಯ ಸಂಪ್ರದಾಯಾಚರಣೆಗಳು, ವಿಧಿ ನಿಷೇಧ ಶಾಸ್ತ್ರಗಳು, ಬಹು

ಪ್ರಮಾಣದಲ್ಲಿರುವ ಮತವನ್ನು ಧರ್ಮ ಎಂಬ ಹೆಸರಿಂದ ಕರೆಯುವುದುಂಟು. ಕಾನೂನು, ವಾಡಿಕೆ, ನೀತಿ, ನಿಯಮ ಇವುಗಳಿಗೂ ಧರ್ಮವೆಂಬ ನಾಮಾಂಕಿತರ ಉಂಟು. ಕರ್ತವ್ಯ, ನ್ಯಾಯ, ಔಚಿತ್ಯ, ಸ್ವಭಾವ, ಗುಣ ಎಂಬ ಇನ್ನೂ ಅನೇಕ ಅರ್ಥಗಳೂ ಅದಕ್ಕುಂಟು. ವೇದಾಂತದ ಪ್ರಕಾರ ಧರ್ಮ ಎಂದರೆ ಅತೀಂದ್ರಿಯ ಜ್ಞಾನ. ಅಂದರೆ ಒಂದು ಪ್ರಾಣಿಯ ಸ್ವಭಾವದಿಂದ ಹಿಡಿದು ದೇವಮಾನವನ ಅತೀಂದ್ರಿಯ ಜ್ಞಾನದವರೆಗೂ ಅದರ ವ್ಯಾಪ್ತಿ ವಿಸ್ತರಿಸಿದೆ. 'ಮಾನವನಲ್ಲಿರುವ ಪಶ್ವಂಶಗಳನ್ನು ನೀತಿ ನಿಯಮಗಳಿಂದ ಶಮದಮಾದಿಗಳಿಂದ ನಿಯಂತ್ರಿಸಿ, ದೇವಾಂಶಗಳನ್ನು ಆತ್ಮಾನುಸಂಧಾನದಿಂದ ವಿಕಸಿತಗೊಳಿಸುವುದೇ ಧರ್ಮ'[1] ಎಂಬ ವಿವರಣೆ ಸ್ವೀಕಾರಯೋಗ್ಯವಾಗಿದೆ. ಮಾನವನ ಶ್ರೇಯಸ್ಸಿಗೆ, ಸಮಾಜದ ಊರ್ಧ್ವಗತಿಗೆ, ಲೋಕಕಲ್ಯಾಣಕ್ಕೆ ಯಾವುದು ಕಾರಣವಾಗುತ್ತದೆಯೋ ಅದೇ ಧರ್ಮ. ಅದರ ಸಾಧನೆಗೆ ಮತ ಮಾಧ್ಯಮವಾಯಿತು, ನಿಜ. ಕಾಲಾನಂತರದಲ್ಲಿ ಧರ್ಮದ ಮೂಲಭೂತ ಮೌಲ್ಯಗಳು ಮತೀಯಾಚರಣೆಗಳ ಮರುಭೂಮಿಯಲ್ಲಿ ಮರೆತುಹೋದವು; ಆತ್ಮ ಸಾಕ್ಷಾತ್ಕಾರ ಶ್ರೇಯಸ್ಸಾಧನೆ ಹಿಂಜರಿದು, ಮೌಢ್ಯ ಸಂಪ್ರದಾಯ ಬಾಹ್ಯಾಡಂಬರಗಳು ಪ್ರಬಲವಾದುವು. ಅಷ್ಟೇ ಅಲ್ಲ, ಮತ ಮನುಷ್ಯ ಮನುಷ್ಯರ ನಡುವಣ ಗೋಡೆಯಾದದ್ದು ಮಾತ್ರವಲ್ಲ, ಹಿಡಿಮಂದಿಯ ಸ್ವಹಿತಾಸಕ್ತಿಗೆ... 

ಭರತಖಂಡದಲ್ಲಿ ಬೌದ್ಧಮತ ವಿನಾ, ಉಳಿದ ಮತಗಳು ಶ್ರೀಸಾಮಾನ್ಯನನ್ನು ಮುಟ್ಟಿದಂತೆ ತೋರುವುದಿಲ್ಲ. ಅವರು ಆಯಾಯ ಮತದ ಅಂಚಿನಲ್ಲಿ ನಿಂತರೇ ಹೊರತು, ಒಳಗೆ ಪ್ರವೇಶಿಸಲಿಲ್ಲ. ಮನೆಗೊಂದು ದೇವರು, ಹಳ್ಳಿಗೊಂದು ದೇವತೆ, ದೊಡ್ಡಿಗೊಂದು ದೆವ್ವ, ಕೇರಿಗೊಂದು ಭೂತ, ಈ ಪರಿಯಲ್ಲಿ ಅಸಂಖ್ಯಾತ ದೇವರು ದಿಂಡರು ಸೃಷ್ಟಿಯಾದರು. ಈ ಕಾರಣದಿಂದಾಗಿ ಸಮಾಜದಲ್ಲಿ ಪ್ರತ್ಯೇಕತಾ ಭಾವನೆಯೇ ಪ್ರಬಲವಾಗಿ, ಅನೇಕ ಜಾತಿ ಕುಲಗಳು ಹುಟ್ಟಿಕೊಂಡು, ಅಂತರ್ಜಾತೀಯ ವಿವಾಹವಾಗಲೀ, ಸಹಭೋಜನವಾಗಲೀ ನಿಷಿದ್ಧವಾಗಿ, ರಾಷ್ಟ್ರ ಛಿದ್ರವಿಚ್ಛಿದ್ರವಾಯಿತು. ಇಡೀ ಸಮಾಜ ಅಭದ್ರವಾಯಿತು. ಸರ್ವಂ ಖಲ್ವಿದಂ ಬ್ರಹ್ಮಂ, ಅಹಂಬ್ರಹ್ಮಾಸ್ಮಿ, ಸೋಹಂ, ಏಕಂ ಸತ್ ಬಹುಧಾ ವಿಪ್ರಾ ವದಂತಿ ಇವೇ ಮೊದಲಾದ ಉಪನಿಷನ್ಮಂತ್ರಗಳು ಗಿಳಿಪಾಠದ ಕಗ್ಗಗಳಾಗುಳಿದುವೇ ಹೊರತು ಜೀವನಸ್ಫೂರ್ತಿಯ ಅಮೃತ ಶಕ್ತಿಯಾಗಲಿಲ್ಲ. ಶ್ರೀಸಾಮಾನ್ಯರ ಹೃದಯಗಳನ್ನೊಂದುಮಾಡುವ ಅಥವಾ ಅವರನ್ನುದ್ಧರಿಸುವ ಸೇತುಶಕ್ತಿಯಾಗಲಿಲ್ಲ, ತಾರಕ ತೇಜಸ್ಸಾಗಲಿಲ್ಲ. ಆಗಿನ ಕಾಲದ ಧಾರ್ಮಿಕ ಸ್ಥಿತಿಗತಿಗಳನ್ನು ಬಸವಣ್ಣನವರೇ ವರ್ಣಿಸಬೇಕು. ಎಲ್ಲೆಂದರಲ್ಲಿ ಮನೆಮಾಡಿಕೊಂಡಿರುವ ಕರೆವೆಮ್ಮೆ ಬಸುರಿ ಬಾಣತಿ ಕೊಡಗೂಸುಗಳನ್ನು ಹಿಡಿದು ತಿಂಬುವ, ಮಾರಯ್ಯ ಬೀರಯ್ಯ ಕೇಚರ ಗಾವಿಲ ಅಂತರ ಬೆಂತರ ಕಾಳಯ್ಯ ದೂಳಯ್ಯ ಕೇತಯ್ಯ ಮೊದಲಾದ ಕಿರುಕುಳ ದೈವಗಳನ್ನು ನಂಬಿ ಜನ ಕೆಟ್ಟರೆಂದು ಅವರು ಸಿಡಿಮಿಡಿಗೊಳ್ಳುತ್ತಾರೆ.

*ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ,*
*ಹಣಿಗೆ ದೈವ, ನಾರಿ ದೈವ, ಕಾಣಿರೋ,*
*ಕೊಳಗ ದೈವ, ಗಿಣ್ಣಲು ದೈವ ಕಾಣಿರೋ!*
*ದೈವ ದೈವವೆಂದು ಕಾಲಿಡಲಿಂಬಿಲ್ಲಾ*

ಎಂದು ಅಜ್ಞಾನ ಜನರ ಕರುಣಾಜನಕ ಸ್ಥಿತಿಯನ್ನು ಕಂಡು ಸಂಕಟಪಡುತ್ತಾರೆ.

ಧರ್ಮಾಂಧ ಶ್ರದ್ಧೆಯುಳ್ಳ ನಾಡಿನಲ್ಲಿ ಧಾರ್ಮಿಕ ಕ್ರಾಂತಿಯಾಗದೆ ಸಾಮಾಜಿಕ ಭದ್ರತೆಯನ್ನಾಗಲೀ, ರಾಷ್ಟ್ರಕಲ್ಯಾಣವನ್ನಾಗಲೀ ಸಾಧಿಸಲಾಗದೆಂದು ನಿಶ್ಚಯಿಸಿಕೊಂಡು, ಬಹು ಜನಪ್ರಿಯವಾಗಿದ್ದ, ಭಕ್ತಿಪ್ರಧಾನವಾಗಿದ್ದ, ಶ್ರೀಸಾಮಾನ್ಯನಿಗೂ ಅರ್ಥವಾಗುವಂತಿದ್ದ, ತಮಗೂ ಸುಪರಿಚಿತವಾಗಿದ್ದ ಪ್ರಾಚೀನತಮ ಶೈವಧರ್ಮವನ್ನು ದೇದೀಪ್ಯಮಾನವಾದ ತಮ್ಮ ಕಲ್ಪನಾ ಪ್ರತಿಭೆಯ ಮೂಷೆಯಲ್ಲಿ ಕರಗಿಸಿ ನವೀಕರಿಸುತ್ತಾರೆ. ಮೊರ ಮೊರಡಿ ಗಿಡಗಂಟೆಗಳ ಮೂಲಕ ನೂರಾರು ದೇವರುಗಳನ್ನು ಪೂಜಿಸುತ್ತ, ಪರಸ್ಪರ ಕಲಹಗಳಲ್ಲಿ ತೊಡಗಿ, ನಿರ್ವೀರ್ಯರಾಗಿದ್ದ ತನ್ನ ಜನರಿಗೊಂದು ಮತವನ್ನು ಕಲ್ಪಿಸಿಕೊಟ್ಟು, ಜಗತ್ತಿನ ಪ್ರಬಲ ಜನಾಂಗವನ್ನಾಗಿ ರೂಪಿಸಿದ ಮಹಮ್ಮದನ ಜಾದುಗಾರಿಕೆಯನ್ನಿಲ್ಲಿ ನೆನೆಯಬಹುದು. ಬಸವಣ್ಣನವರ ನವೀಕರಣ ಕಾರ್ಯ ಸುಲಭವಾದುದಾಗಿರಲಿಲ್ಲ. ಅದು ಅನ್ಯಮತಗಳಿಗೆ ಕುಠಾರಪ್ರಾಯವಾಗಿದ್ದುದರಿಂದ ತನ್ಮತೀಯರ ಸೇಡು ಹಿಂಸೆ ಪ್ರತಿಭಟನೆ ವಿಘ್ನಗಳನ್ನೆದುರಿಸಬೇಕಾಯಿತು ; ಸಾವಿರಾರು ವರ್ಷಗಳ ಅಜ್ಞಾನದ ಅಂಧಕಾರದಿಂದ ಸಾಮಾನ್ಯರನ್ನು ಮೇಲೆತ್ತುವ ಸಾಹಸ ಅವರಿಗೊಂದು ಸವಾಲಾಯಿತು. ವಿರೋಧವನ್ನು ಹತ್ತಿಕ್ಕಿ, ಜನರನ್ನು ತಿದ್ದುವುದರ ಜತೆಗೆ ಅವರಿಗೊಪ್ಪುವಂಥ ಅವರಿಗೆಟಕುವಂಥ ಧರ್ಮ ಸೂತ್ರಗಳನ್ನು ರಚಿಸಬೇಕು ; ನಿರಾಕಾರದ ಕಲ್ಪನೆ ಸಾಧ್ಯವಿಲ್ಲದವರಿಗೆ ಸಂಕೇತದ ಮೂಲಕವಾದರೂ ಸಾಕಾರದ ಸೌಲಭ್ಯವನ್ನು ಕಲ್ಪಿಸಬೇಕು ; ಆ ಸಂಕೇತ ವಿಗ್ರಹವಾಗಬಾರದು, ನಿರಾಕಾರದ ಭ್ರಮೆಯನ್ನು ಮೂಡಿಸಬೇಕು ; ನಾನಾ ಸಂಪ್ರದಾಯಗಳ ಜನ ನೂತನ ಮತವನ್ನು ಸ್ವೀಕರಿಸಿದ ನಂತರ ಅವರವರೊಳಗೆ ತಿಕ್ಕಾಟವಾಗಬಾರದು, ಅವರಿಂದಾಗಿ ನೂತನ ವ್ಯವಸ್ಥೆ ಶಿಥಿಲವಾಗಬಾರದು, ಅವರು ಮತ್ತೆ ಹಿಂದಕ್ಕೆ ಸರಿಯಬಾರದು, ಅವರ ದೃಷ್ಟಿ ಧ್ವನಿ ಮನೋಧರ್ಮ ವಿಚಾರಾಚಾರವೇ ಮೊದಲಾದ ಜೀವನ ವ್ಯಾಪಾರಗಳಲ್ಲಿ ಏಕತೆಯನ್ನು ರೂಪಿಸಬೇಕು ; ಇವೆಲ್ಲಕ್ಕಿಂತ ಮಿಗಿಲಾಗಿ ಅವರು ಶಿವಪಥಾವಲಂಬಿಗಳಾಗಿ ಲಿಂಗಾಂಗ ಸಾಮರಸ್ಯವನ್ನು ಸಾಧಿಸಬೇಕು ; ಇದು ಅವರ ಸಾಹಸೋದ್ದೇಶವಾಗಿರಬೇಕು.

ತಮ್ಮ ಸಾಹಸೋದ್ಯಮದ ಮೊದಲ ಹೆಜ್ಜೆಯಾಗಿ ಸಾಮಾನ್ಯರಿಗೂ ಮನಸ್ಸಿಗೆ ನಾಟುವ ಭಾಷೆಯಲ್ಲಿ, ಬಣ್ಣ ಕಟ್ಟದೆ, ಲೇಪ ಹಚ್ಚದೆ, ನೇರವಾದ ಸೂತ್ರವನ್ನು ಜನರ ಮುಂದಿಡುತ್ತಾರೆ.

*ದೇವನೊಬ್ಬ ನಾಮ ಹಲವು ;*
*ಪರಮ ಪತಿವ್ರತೆಗೆ ಗಂಡನೊಬ್ಬ,*[2]
*ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ವನು !*
*ಹಲವು ದೈವದ ಎಂಜಲ ತಿಂಬರವನೇನೆಂಬೆ,*
*ಕೂಡಲ ಸಂಗಮದೇವಾ ?*

ಮಾತು ತುಸು ಕಠಿಣವಾಯಿತೆನ್ನಬಹುದು. ಯಾವ ಚಿಕಿತ್ಸೆಗೆ, ಯಾವ ದೇಹಕ್ಕೆ ಎಂಥ ಶಸ್ತ್ರ ಬಳಸಬೇಕೆಂಬ ಉಪಾಯ ವೈದ್ಯನಿಗೆ ಮಾತ್ರ ಗೊತ್ತಷ್ಟೆ? ಕೆಲವೊಮ್ಮೆ ಅವರ ಮಾತು ಇನ್ನೂ ಕ್ರೂರವಾಗುತ್ತದೆ ; 'ಕರ್ತಾರನ ಪೂಜಿಸಿ ಕುಚ್ಚಿತ ದೈವಕ್ಕೆರಗುವರು ಕತ್ತೆ ಕುದುರೆಗೆ ಹುಟ್ಟಿದ ವೇಸರನಂತೆ !'' ಅನ್ಯದೈವವೆಂಬುದು ಹಾದರ ಕಾಣಿರೋ!' ಲಿಂಗಧಾರಣೆ ಮಾಡಿದ ನಂತರವೂ

೧. ಬಸವಣ್ಣನವರ ಜೀವನ ಹಾಗೂ ಸಂದೇಶ : ಡಾ. ಸಿದ್ದಯ್ಯ ಪುರಾಣಿಕ, ಪು-೬೫.





ಹಿಂದಿನ ಮಾರಿ ಮಸಣಿಯರ ಪೂಜೆಯನ್ನು ಮುಂದುವರಿಸುತ್ತಿದ್ದ ಒಬ್ಬರಿಗಾಳಾಗಿ ಒಬ್ಬರನೋಲೈಸುವ ನಿರ್ಬುದ್ಧಿ ಮನುಜರನ್ನು ಕಂಡಾಗ, ಅವರನ್ನು ಶಿವಪಥಕ್ಕೆ ತರಲು ಕಷ್ಟವಾದಾಗ, ಅವರ ಮೇಲಣ ಮರುಕದಿಂದಲೇ ಅವರು ಬಿರುನುಡಿಗಳನ್ನು ಬಳಸುತ್ತಾರೆ. 'ಅವರ ನಡೆಯೊಂದು ನುಡಿಯೊಂದಾದರೆ ಶಿವಾಚಾರಕ್ಕೆ ಸಲ್ಲುತ್ತಾರೆಯೆ?' ಎಂದವರು ಪ್ರಶ್ನಿಸುತ್ತಾರೆ. ಅತ್ತ ಇತ್ತ ಚಿತ್ತವನ್ನು ಹರಿಯಗೊಡದೆ, 'ನಂಬಿ ಕರೆದಡೆ ಓ ಎನ್ನನೆ ಶಿವನು ?' ಎಂದವರು ತಾವು ಕಂಡ ಸತ್ಯವನ್ನು ಸಾರುತ್ತಾರೆ. ಚಿತ್ತೈಕಾಗ್ರತೆಗಾಗಲೀ ಸತ್ಯಾನ್ವೇಷಣೆಗಾಗಲೀ, ಆಧ್ಯಾತ್ಮ ಸಾಧನೆಗಾಗಲೀ ಏಕದೇವತೋಪಾಸನೆ ಅನಿವಾರ್ಯವೆಂಬ ಸಂಗತಿಯನ್ನಂತು ಯಾರೂ ಅಲ್ಲಗಳೆಯುವಂತಿಲ್ಲ.

ಬಸವಣ್ಣನವರಂಥ ಋಷಿಸದೃಶರು ಅನ್ಯದೇವರುಗಳ ಬಗ್ಗೆ ಆಡಿರುವ ಮಾತುಗಳು ಮರ್ಯಾದೆಯ ಮೀರಿ ಮೀರಿವೆಯೆಂಬ ಶಂಕೆಗೆ ಅವಕಾಶವಿಲ್ಲದಿಲ್ಲ. ಕೂಡಲ ಸಂಗಯ್ಯನ ವಿವಿಧಾಂಗಗಳಲ್ಲಿ ಸಕಲ ದೇವತೆಗಳ ಜನನವಾಯಿತೆಂದು ಹೇಳುವಲ್ಲಿ ತಪ್ಪಿಲ್ಲ. 'ಹರಿಹರನೊಂದೆ ಎಂದರೆ ಸುರಿಯುವೆ ಬಾಯಲ್ಲಿ ಹುಳುಗಳು ?' ; 'ವಿಷ್ಣು ನಾನಾಯೋನಿಯಲ್ಲಿ ಬಾರದ ಭವಂಗಳಲ್ಲಿ ಬರುತ್ತಿಪ್ಪ ; ರುದ್ರ ನಾವಯೋನಿಯಲ್ಲಿ ಬಂದನೆಂದು ನೀವು ಹೇಳಿರೊ ?'' 'ನಾರಾಯಣಗೀರಾಯಣನೆಂಬವನ ಕಾಣೆ' ; 'ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದ ಕಂಡೆ' ; 'ಜಿನನ ಪೂಜಿಸಿ ಬತ್ತಲೆಯಿಪ್ಪುದ ಕಂಡೆ' ; ' ಆದಿಪುರಾಣ ಅಸುರರಿಗೆ ಮಾರಿ, ವೇದಪುರಾಣ ಹೋತಿಂಗೆ ಮಾರಿ' ; ಇವು ಅವಾಚ್ಯವಲ್ಲದಿದ್ದರೂ, ಇಂಥ ನಿಂದೆಯ ಮಾತು ಬಸವಣ್ಣನವರ ನಾಲಗೆಯಿಂದ ಮೂಡಿದುವೆಂದರೆ ನಂಬಲಿಕ್ಕಾಗದು. ಹೊಸದಾಗಿ ತಮ್ಮ ಮತಕ್ಕೆ ಸೇರಿದ ಶರಣರಲ್ಲಿ ಚಿತ್ತೈಕಾಗ್ರತೆ ಸಾಧ್ಯವಾಗುವಂತೆ ಮಾಡಲು ಇಂಥ ಮಾತು ಅವಶ್ಯವೆಂದವರಿಗೆ ಕಂಡಿರಬೇಕು. ಅದಕ್ಕಿಂತ ಮಿಗಿಲಾಗಿ, ಅವುಗಳ ಸಿಡಿತಕ್ಕೆ ಅನ್ಯಮತೀಯ ಕುಹಕ ಕುಟಿಲ ಕುತಂತ್ರ ಚಿತ್ರಹಿಂಸೆ ಮತ್ತು ಪ್ರಚೋದನೆಗಳು ಕಾರಣವಾಗಿರಬೇಕು. ಜತೆಗೆ ಆಗಿನ ಕಾಲದ ಸಾಮಾಜಿಕ ಮತ್ತು ಪರಿಸರದ ಹಿನ್ನೆಲೆಯಲ್ಲಿ ಹಾಗೂ ಬಸವಣ್ಣನವರ ಸುನಿರ್ಮಲ ಜೀವನದ ಹಿನ್ನೆಲೆಯಲ್ಲಿ ಅವುಗಳು ಸಮರ್ಥನೀಯವೆ, ಅಲ್ಲವೆ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ.

ಅಂತರಂಗ ಶುದ್ಧಿಯಿಲ್ಲದ ಪೂಜೆ ಪ್ರಾರ್ಥನೆಗಳನ್ನವರು ಹೀಗಳೆಯುತ್ತಾರೆ. ಕಳಬೇಡ ಕೊಲಬೇಡ ಮೊದಲಾದ ಏಳು 'ಬೇಡ' ಗಳ ಮೂಲಕ ಅಂತರಂಗ ಹಾಗೂ ಬಹಿರಂಗ ಶುದ್ಧಿಯನ್ನು ಸಂಪಾದಿಸಿಕೊಳ್ಳಬಹುದೆಂದು ನಿರವಿಸುತ್ತಾರೆ.[3] ದಿಟವ ನುಡಿವುದು, ನುಡಿದಂತೆ ನಡೆವುದು ಶಿವನಿಗೆ ಒಪ್ಪು; ನಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ಎಚ್ಚರ ತಪ್ಪಿದರೆ ಆತ್ಮಘಾತಕವಾಗುತ್ತದೆ. ದಯವಿಲ್ಲದ ಧರ್ಮವಿಲ್ಲ, ದುರಾಚಾರಿ ದುರ್ವ್ಯಸನಿ ಶಿವದ್ರೋಹಿ. ಇದನ್ನರಿತು ಕಾಯಕದ ಮೂಲಕ ಸ್ವಾವಲಂಬಿಯಾಗಿ ನಿಷ್ಠೆ ನೇಮಗಳಿಂದ ಬದುಕನ್ನು ನಡೆಸಿದ್ದಾದರೆ ಅಂತರಂಗ ಶುದ್ಧಿ ತಾನಾಗಿಯೇ ಕೈಗೂಡುತ್ತದೆಂದು ಅವರು ತೋರಿಸಿಕೊಟ್ಟಿದ್ದಾರೆ.

ಷಟ್ಸ್ಥಲ ಸಿದ್ಧಾಂತ ವೀರಶೈವ ಧರ್ಮದ ನೆಲೆಗಟ್ಟೂ ಅಹುದು, ವೈಶಿಷ್ಟ್ಯವೂ ಅಹುದು ; ತಾತ್ವಿಕ ನೆಲಗಟ್ಟಿಲ್ಲದ ಯಾವ ಧರ್ಮವೂ ಬಹುಕಾಲ ಉಳಿಯಲಾರದು. ಸಮರತಿ, ಸಮಕಳೆ, ಸಮಸುಖವನ್ನರಿಯುವ, ಲಿಂಗಾಂಗ ಸಾಮರಸ್ಯವನ್ನು ಸಾಧಿಸುವ ವಿಧಾನವೇ ಅದು. ಇದರ ಜತೆಗೆ ವಿಗ್ರಹಾರಾಧನೆಯ ತಿರಸ್ಕಾರ, ಪೌರೋಹಿತ್ಯ ವರ್ಜನೆ ಮತ್ತು ಇಷ್ಟಲಿಂಗಧಾರಣೆ ಇವು ಮೂರೂ ಸೇರಿಕೊಂಡು ಬಸವಣ್ಣನವರು ಸಾಧಿಸಿದ ಧಾರ್ಮಿಕ ಕ್ರಾಂತಿಯ ಚಕ್ರ ಚತುಷ್ಟಯಗಳಾಗುತ್ತವೆ. ಅನ್ಯಧರ್ಮಗಳಲ್ಲಿ ಕಾಣದ, ವೀರಶೈವ ಧರ್ಮದ ಸ್ವತಂತ್ರವಾದ ಅಸ್ತಿತ್ವಕ್ಕೆ ಕಾರಣವಾದ ಮೂಲಭೂತ ತತ್ವಗಳಿವು.

ಹಿಂದೂ ಧರ್ಮಕ್ಕೆ ಅಭಿಶಾಪದಂತಿರುವ, ಶೋಷಣೆಯೇ ಮೂರ್ತಿವೆತ್ತಂತಿರುವ, ಪೌರೋಹಿತ್ಯವನ್ನು ಗಡಿಪಾರುಮಾಡಿದ್ದು ಬಸವಣ್ಣನವರ ಯಶಸ್ಸಿಗೆ ತಿಲಕವಾಗುತ್ತದೆ ; ಜನತೆಯ ಅಜ್ಞಾನಕ್ಕೆ; ಮೌಢ್ಯಸಂವರ್ಧನೆಗೆ, ಜಾತೀಯತೆಯ ವಿಷಮತೆಗೆ, ತಾರತಮ್ಯ ಪೋಷಣೆಗೆ, ನಾಡಿನ ಅಧೋಗತಿಗೆ, ವಿಚಾರಸ್ವಾತಂತ್ರ್ಯದ ಅಭಾವಕ್ಕೆ ಪುರೋಹಿತರೇ ಕಾರಣರೆಂಬುದನ್ನವರು ಬಲ್ಲರು. ಎಲ್ಲೆಲ್ಲೂ ಭಗವಂತನಿರುವಾಗ, ಮಾರ್ಗದರ್ಶನಕ್ಕೆ ಗುರುವಿರುವಾಗ, ಭಗವಂತ ಭಕ್ತರ ನಡುವಣ ದಳ್ಳಾಳಿತನಕ್ಕೆ ಅಗತ್ಯವೆನ್ನುವುದು ಅವರ ಭಾವನೆ. ಬಂಡವಾಳಗಾರಿಕೆಗೆ ಲೆನಿನ್ ಎಂತೋ, ಪೌರೋಹಿತ್ಯಕ್ಕೆ ಬಸವಣ್ಣನವರು ಸಿಂಹಸ್ವಪ್ನವಾಗುತ್ತಾರೆ, 'ಏನಯ್ಯಾ, ವಿಪ್ರರು ನುಡಿದಂತೆ ನಡೆಯರು ; ಇದೆಂತಯ್ಯಾ ; ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ' ಎನ್ನುವಲ್ಲಿ ಅವರ ಸಂಕುಚಿತ ಮನೋಧರ್ಮ ಹಾಗೂ ಅಧಿಕಾರ ದರ್ಪ ಸುವ್ಯಕ್ತವಾಗುತ್ತದೆ. ಅವರು ಆಡಿದ್ದೇ ವೇದ, ಮಾಡಿದ್ದೇ ಮಾಟ ; ಅವರಿಗೊಂದು ಶಾಸ್ತ್ರ ಬೇರೆಯವರಿಗೆ ಮತ್ತೊಂದು ಶಾಸ್ತ್ರ ಅವರಲ್ಲಿ ಎಳ್ಳಷ್ಟೂ ಭೂತದಯೆಯಿಲ್ಲ. ಮಾನವತಾದೃಷ್ಟಿಯಂತು ಶೂನ್ಯ. ಘಸ್ನಿ ಮಹಮ್ಮದ್ ಮೊದಲಾದ ವಿದೇಶೀಯರು ಇಲ್ಲಿಯ ಭೌತಿಕ ಸಂಪತ್ತನ್ನು ಕೊಳ್ಳೆ ಹೊಡೆದರೆ, ಈ ಸ್ವದೇಶೀಯರು ಮಾನವತೆಯನ್ನೇ ಲೂಟಿ ಮಾಡಿದ್ದುಂಟು.

೨. **And ye have not, beside Allah, any friend or helper. - Mohamed**

೩. ಭಗವದ್ಗೀತೆಯಲ್ಲಿ ಬರುವ ಕ್ಷೇತ್ರಜ್ಞನ ಲಕ್ಷಣಗಳನ್ನು (೧೩/೭-೧೨) ಹೋಲಿಸಿ ನೋಡಬಹುದು. ಮೋಸೆಸ್‌ನ ಕೆಲವು ಸೂಕ್ತಿಗಳನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು.

**Thou shalt not have strange gods**
**Thou shalt not kill**
**Thou shalt not commit adultery ;**
**Thou shalt not steal ;**
**Thou shalt not steal thy neighbour's goods**

ಇವುಗಳಿಗೂ ಬಸವಣ್ಣನವರ ವಚನಗಳಿಗೂ ಅದೆಷ್ಟು ಸಾಮ್ಯವಿದೆ ಎನ್ನುವುದನ್ನು ಗಮನಿಸಬಹುದು. ಬುದ್ಧ ಹೇಳಿದ : **The immortal can be reached only by continuous acts of kindness ; perfection by compassion and charity.** ಈ ಗುಣಗಳೇ ಬಸವೋಪದೇಶದ ಮೂಲದ್ರವ್ಯ.

ಪೌರೋಹಿತಕ್ಕೂ ವಿಗ್ರಹಾರಾಧನೆಗೂ ನಿಕಟಸಂಬಂಧವಿದೆ. ಕೆಲವು ವಿನಾ ಯಾವ ಹಿಂದೂ ದೇವಾಲಯಗಳಿಗೆ ಹೋದರೂ ಜಿಗುಪ್ಸೆ ಮೂಡದಿರದು. ಸರ್ವವ್ಯಾಪಿಯಾದ ಭಗವಂತನನ್ನು ಗುಡಿಯೆಂಬ ಸೆರೆಗೆ ನೂಕಿ, ಪೂಜಾರಿ ಅವನನ್ನು ತನ್ನ ಗುಲಾಮನನ್ನಾಗಿ ಮಾಡಿಕೊಂಡಂತೆ ಭಾಸವಾಗುತ್ತದೆ. ಭಗವಂತ ತನ್ನ ಸರ್ವಜ್ಞತೆಯನ್ನೂ, ಸರ್ವಶಕ್ತತೆಯನ್ನೂ, ನಿರಂಜನತ್ವವನ್ನೂ ಮರೆತು ಪೂಜಾರಿಯ ಊಳಿಗಕ್ಕಣಿಯಾಗಿ ನಿಂತಂತೆ ತೋರುತ್ತದೆ. ಅವನು ಪೂಜಾರಿ, ನಾಮ ಹಾಕಿದರೆ ಹಾಕಿಸಿಕೊಂಡು, ಬೂದಿ ಬಳಿದರೆ ಬಳಿಸಿಕೊಂಡು, ಯಾವು ಯಾವುದೋ ದಾರದಿಂದ ಬಿಗಿಸಿಕೊಂಡು, ನಾನಾ ಭಂಗಗಳನ್ನು ಸಹಿಸಿಕೊಂಡಿರುವಂತೆ ತಿಳಿಯುತ್ತದೆ. ಇದೂ ಬೇಡ ; ಗುಡಿಯಲ್ಲಿ ದೇವರಿದ್ದಾರೆಂದೇ ನಂಬೋಣ, ಭಗವಂತನ ಸ್ವರೂಪವನ್ನರಿತುಕೊಂಡು, ತಲ್ಲೀನರಾಗಿ ಅರ್ಚಿಸುವ, ಮೃಣ್ಮಯದಲ್ಲಿ ಚಿನ್ಮಯವನ್ನು ಕಾಣುವ, ಆಧ್ಯಾತ್ಮ ಸಿದ್ಧಿಯನ್ನು ಪಡೆದಿರುವ ಪೂಜಾರಿಗಳು, ಈ ದೇಶದಲ್ಲಿ ಎಷ್ಟು ಜನರಿದ್ದಾರೆ ? ಇತಿಹಾಸ ನಾಲ್ಕಾರು ಮಂದಿಯನ್ನು ಕಂಡಿರಬಹುದು. ಅದೂ ಇರಲಿ, ಪೂಜಾರಿಯ ಪೂಜೆಯಿಂದ ಅಥವಾ ಮಧ್ಯಸ್ತಿಕೆಯಿಂದ ತೃಪ್ತಿಗೊಳ್ಳುವ ಜನ ಅವನಿಗೆ ಉಣ್ಣಿಸಿ ತಾವು ತಣಿಯಬಾರದೇಕೆ ?

*ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು*
*ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ ?*
*ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮದ ತಾ ಮಾಡಬೇಕಲ್ಲದೆ*
*ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ ?*
*ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ*
*ನಿಮ್ಮನೆತ್ತ ಬಲ್ಲರು ಕೂಡಲ ಸಂಗಮದೇವಾ ?*

ಪೌರೋಹಿತ್ಯದ ಅನಗತ್ಯತೆಯನ್ನೂ, ವ್ಯಕ್ತಿ ಸ್ವಾತಂತ್ರ್ಯದ ಆವಶ್ಯಕತೆಯನ್ನೂ ಬಸವಣ್ಣನವರು ಮೇಲಿಂದ ಮೇಲೆ ಪ್ರತಿಪಾದಿಸುತ್ತಾರೆ. ಅಧ್ಯಾತ್ಮ ಸಾಧನೆಯೆಂಬುದು ವ್ಯಾಪಾರವಲ್ಲ, ವಾಣಿಜ್ಯ ವ್ಯವಹಾರವಲ್ಲ, ಜೀವನಯಾಪನೆಗಾಗಿ ಕೈಕೊಳ್ಳುವ ವೃತ್ತಿಯೂ ಅಲ್ಲ. ಈಶ್ವರ ಸಾಕ್ಷಾತ್ಕಾರಕ್ಕೆ ಸ್ವಾನುಭವವೇ ಪರಮಪ್ರಮಾಣ, ಅದೇ ಮೂಲಾಧಾರ; ಅಷ್ಟುಮಾತ್ರವಲ್ಲ ಅವೆರಡೂ ಪರಸ್ಪರ ಭಿನ್ನವಾದುವಲ್ಲ. ಭಗವಂತ ಭಕ್ತರ ನಡುವೆ ನೇರ ಸಂಪರ್ಕವುಂಟಾದಾಗಲೇ ಸ್ವಾನುಭವ ಸಾಧ್ಯ. ಪ್ರತಿಯೊಬ್ಬ ವ್ಯಕ್ತಿಯೂ ಪರಂಜ್ಯೋತಿಯ ವಿಸ್ಫುಲಿಂಗ ; ಶಬ್ದದೊಳಗಣ ನಿಶ್ಶಬ್ದದಂತೆ, ಕಾಷ್ಠದೊಳಗಣ ಚಲನೆಯಂತೆ ಅವನ ಚೇತನದೊಳಗೆ ಶಿವತತ್ವವಡಗಿದೆ ; ಆ ಶಿವತತ್ವದ ಪ್ರಜ್ಞೆ ವಿಕಾಸಗೊಂಡಾಂಗ ಅವನು ಶಿವನ ಕಡೆಗೆ ಮುಖವಾಗುತ್ತಾನೆ. ಶಿವತತ್ವ ವಿಕಾಸಕ್ಕೆ ವ್ಯಾಘಾತವುಂಟುಮಾಡುವ ಪ್ರತಿಬಂಧಕಗಳ ನಿರ್ಮೂಲನವೇ ಬಸವಣ್ಣನವರ ಧಾರ್ಮಿಕ ಕ್ರಾಂತಿಯ ರಹಸ್ಯ.

ತನ್ನನ್ನು ತಾನರಿವುದೇ ಅಧ್ಯಾತ್ಮ ಸಾಧನೆಯ ಗುರಿಯೆನ್ನುವುದಾದರೆ ಭಕ್ತ ಆತನನ್ನಾಗಲೀ ಸರ್ವವ್ಯಾಪಿಯಾದ ಭಗವಂತನನ್ನಾಗಲೀ ಅರಸಿಕೊಂಡು ಕಾನನಾಂತರ - ಕ್ಕಾಗಲೀ ಗಿರಿಗುಹೆಗಳಿಗಾಗಲೀ ಹೋಗಬೇಕಾಗಿಲ್ಲ. ಕಾಯವೇ ಈಶನಿರ್ಮಿತ ದೇವಾಲಯವಾಗಿರುವಾಗ ಬೇರೆ ದೇವಾಲಯಕ್ಕೆ ಹೋಗಬೇಕಾಗಿಲ್ಲ ; ಹೊರಗಿನ ಜಲಾಗ್ನಿ ನೈವೇದ್ಯಗಳಿಗಾಗಿ ಕ್ಲೇಶಪಡಬೇಕಾಗಿಲ್ಲ.

*ಕಾಯವೆಂಬ ಘಟಕ್ಕೆ ಚೈತನ್ಯವೇ ಸಯದಾನ*
*ಸಮತೆಯೆಂಬ ಜಲ, ಕರಣಾದಿಗಳೆ ಶ್ರವಣ ;*
*ಜ್ಞಾನವೆಂಬಗ್ನಿಯನಿಕ್ಕಿ,*
*ಮತಿಯೆಂಬ ಸಟ್ಟುಗದಲ್ಲಿ ಘಟ್ಟಿಸಿ ಪಾಕಕ್ಕೆ ತಂದು,*
*ಭಾವದಲ್ಲಿ ಕುಳ್ಳಿರಿಸಿ, ಪರಿಣಾಮದೋಗರವ ನೀಡಿದರೆ*
*ಕೂಡಲ ಸಂಗಮದೇವರಿಗೆ ಆರೋಗಣೆಯಾಯಿತ್ತು*

ಬಡವ ಬಲ್ಲಿದನೆನ್ನದೆ, ಸ್ಪೃಶ್ಯಾಸ್ಪೃಶ್ಯರೆನ್ನದೆ, ಸ್ತ್ರೀಪುರುಷರೆನ್ನದೆ ಇದು ಸರ್ವರಿಗೂ ಸುಲಭವಾಗಿ ಎಟಕುವ ವಿಧಾನ. ಭಗವಂತನ ಸಾಮ್ರಾಜ್ಯ ಮತ್ತೆಲ್ಲಿಯೋ ಇದೇ ಸತ್ಯ ಹುದುಗಿದೆ. ಕಾಯವೇ ದೇವಾಲಯವೆಂದು ಹೇಳುವುದು ಹೇಗೆ ? ಅದಕ್ಕೆ ಬಸವಣ್ಣನವರ ಉತ್ತರವಿದು.

*ಉಳ್ಳವರು ಶಿವಾಲಯವ ಮಾಡುವರು ;*
*ನಾನೇನು ಮಾಡುವೆ ? ಬಡವನಯ್ಯಾ ;*
*ಎನ್ನ ಕಾಲೇ ಕಂಭ, ದೇಹವೇ ದೇಗುಲ,*
*ಸಿರ ಹೊನ್ನ ಕಳಸವಯ್ಯಾ.*

*ಕೂಡಲ ಸಂಗಮದೇವ, ಕೇಳಯ್ಯಾ,*
*ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲಾ !*

ಆದ್ದರಿಂದ ದೇವಾಯಲ ನಿರ್ಮಾಣವಾಗಲೀ, ವಿಗ್ರಹ ಪ್ರತಿಷ್ಠೆಯಾಗಲೀ ನಿಷ್ಪ್ರಯೋಜಕ ಎಂಬುದು ಬಸವಣ್ಣನವರ ಮತ.

ಸಾಮಾನ್ಯವಾಗಿ ಪ್ರಪಂಚದ ಎಲ್ಲ ಮತಗಳೂ ಸ್ವರ್ಗ ಮರ್ತ್ಯ ಪಾತಾಳಗಳನ್ನು ಸೃಷ್ಟಿಸಿಕೊಂಡಿರುವುದುಂಟು. ಮನುಷ್ಯ, ಜನ್ಮವೆತ್ತಿದಾಗ ಇರಲಿಕ್ಕೊಂದು ಲೋಕ, ಸತ್ತ ಮೇಲೆ ಹೋಗಲಿಕ್ಕೆರಡು ಲೋಕ, ಒಂದು ಪಾಪಿಷ್ಠರಿಗೆ, ಮತ್ತೊಂದು ಪುಣ್ಯಶಾಲಿಗಳಿಗೆ. ಅವನ್ನು ನೋಡಿದವರಾರು ? ನೋಡಿ ಬಂದವರು ಯಾರು ? ಜನರ ನೈತಿಕ ಜೀವನನ್ನು ನಿಯಂತ್ರಿಸುವ ಸಲುವಾಗಿ ಕವಿ ಕಲ್ಪನೆ ನಿರ್ಮಿಸಿದ ಲೋಕಗಳವು. ಇವನ್ನು ನೆನೆದಾಗ ಮೌಢ್ಯಜೀವಿಗಳನ್ನು ಬುದ್ಧಿಜೀವಿಗಳೂ ಪ್ರಾಥಮಿಕ ಶಾಲೆಯ ಮಕ್ಕಳನ್ನು ಉಪಾಧ್ಯಾಯರೂ ಶಿಕ್ಷಿಸುವ ವಿಧಾನ ಕಣ್ಮುಂದೆ ನಿಲ್ಲುತ್ತದೆ. ಅಜ್ಞಾನವೇ ಬಂಡವಾಳವಾಗಿರುವ ಕಡೆಗಳಲ್ಲಿ ಇಂಥ ಕಿನ್ನರ ಪ್ರಾಬಲ್ಯವೇ ಅಧಿಕ. ವಿಚಾರವಾದಿಯೂ ಸತ್ಯಶೋಧಕರೂ ಆದ ಬಸವಣ್ಣನವರು ಆ ಹುಚ್ಚು ಕಲ್ಪನೆಗಳನ್ನೆಲ್ಲ ತಿರಸ್ಕರಿಸಿ, ಮರ್ತ್ಯಲೋಕವೆಂಬುದೊಂದೇ ಸತ್ಯವೆಂದು ಸಾಧಾರವಾಗಿ ಪ್ರತಿಪಾದಿಸುತ್ತಾರೆ. ಜಗತ್ತು ಬ್ರಹ್ಮನಿಂದ ಉತ್ಪತ್ತಿಯಾಗಿ, ಬ್ರಹ್ಮ ಸರ್ವವ್ಯಾಪಿಯಾಗಿರುವ ಪಕ್ಷಕ್ಕೆ, ಮರ್ತ್ಯವೇ ಸರ್ವಸ್ವವೆನ್ನಲಾಗದೆ ? ಬ್ರಹ್ಮ ಸಾಕ್ಷಾತ್ಕಾರವೇ ಮಾನವನ ಜೀವಿತೋದ್ದೇಶವೆನ್ನುವ ಪಕ್ಷಕ್ಕೆ ಅವನಿಗೆ ಅಪ್ಸರೆಯರ ಸಂಗವೇಕೆ ? ನರಕಯಾತನೆಯಂತೂ ಬೇಡ, ಸತ್ತನಂತರ ಜೀವದ ಸ್ಥಿತಿ ಏನಾಗುತ್ತದೋ ಯಾರಿಗೂ ಗೊತ್ತಿಲ್ಲ. ಗೊತ್ತಿಲ್ಲದ ವಿಷಯಕ್ಕಾಗಿ ಬಾಯಾರುವುದಕ್ಕಿಂತ ಬುದ್ಧನಂತೆ ಮೌನವಾಗಿರುವುದೇ ಲೇಸು. ಬ್ರಹ್ಮೈಕ್ಯವೇ ಸಕಲ ಸಾಧನೆಗಳ ಗುರಿಯೆನ್ನುವುದಾದರೆ, ಸರ್ವವ್ಯಾಪಿಯಾಗಿರುವ ಬ್ರಹ್ಮನನ್ನರಸಿಕೊಂಡು ಸ್ವರ್ಗಕ್ಕೆ ಹೋಗಬೇಕಾಗಿಲ್ಲ. ಅನಿಶ್ಚಿತವಾದ ಸ್ವರ್ಗ ಸುಖಕ್ಕಾಗಿ, ಕೈ ಎಟುಕಿನಲ್ಲಿರುವ ಸುಖವನ್ನು ಬಲಿಗೊಡಬಾರದೆಂಬ ಭಾವನೆಯೂ ತಿರಸ್ಕರಣೀಯವಲ್ಲ. ಇಂಥ ಗೊಂದಲದಲ್ಲಿ ಸಿಕ್ಕಿಕೊಂಡ ಮಾನವ ಗುರಿತಪ್ಪಿ ಕಕ್ಕಾಬಿಕ್ಕಿಯಾಗಿದ್ದಾನೆ.

*(ಮುಂದುವರಿಯುತ್ತದೆ)*





# ವಚನಕಾರರು ಮತ್ತು ಶಿಕ್ಷಣದ ಮೌಲ್ಯಗಳು

- ಡಾ|| ಆರ್. ನಾಗರಾಜಯ್ಯ, ಪ್ರಾಧ್ಯಾಪಕರು
ರಾಷ್ಟ್ರೀಯ ಶಿಕ್ಷಣ ಮಹಾವಿದ್ಯಾಲಯ
ಜಯನಗರ, ಬೆಂಗಳೂರು.

೧೨ನೇ ಶತಮಾನದ ವಚನಕಾರರು ಸಮಾಜದ ವಿವಿಧ ಮೌಲ್ಯಗಳನ್ನು ತಮ್ಮ ವಚನಗಳ ಮೂಲಕ ವ್ಯಾಖ್ಯಾನ ಮಾಡಿದ್ದಾರೆ. ಸಮಾಜದ ಅಂಕು-ಡೊಂಕುಗಳನ್ನು ತಿದ್ದಲು ಸರ್ವರೀತಿಯ ಪ್ರಯತ್ನ ಮಾಡಿದ್ದಾರೆ. ಸಾಮಾಜಿಕ ಬದುಕಿನ ದ್ವಂದ್ವಗಳನ್ನು ಬಹಳ ಅರ್ಥಪೂರ್ಣವಾಗಿ ತಿಳಿಸಿದ್ದಾರೆ. ಅವರು ತಮ್ಮ ಬೌದ್ಧಿಕ ಸಾರಾಂಶವನ್ನು ಸರಳ ಶೈಲಿಯಲ್ಲಿ ಸಾಮಾನ್ಯನಿಗೆ ಅರ್ಥವಾಗುವಂತೆ ಮಂಡಿಸಿದ್ದಾರೆ. ಸಾಮಾಜಿಕ ಬದುಕಿನ ದ್ವಂದ್ವಗಳನ್ನು ಬಹಳ ಅರ್ಥಪೂರ್ಣವಾಗಿ ತಿಳಿಸಿದ್ದಾರೆ. ಅವರು ತಮ್ಮ ಬೌದ್ಧಿಕ ಸಾರಾಂಶವನ್ನು ಸರಳ ಶೈಲಿಯಲ್ಲಿ ಸಾಮಾನ್ಯನಿಗೆ ಅರ್ಥವಾಗುವಂತೆ ಮಂಡಿಸಿದ್ದಾರೆ. ಇವರು ಆಧ್ಯಾತ್ಮಿಕವಾಗಿಯೂ, ತಾತ್ವಿಕವಾಗಿಯೂ ತಮ್ಮ ಅಂತರಾಳದ ಚಿಂತನೆಗಳನ್ನು ಬಹಿರಂಗಪಡಿಸುವುದರ ಮೂಲಕ ಜನಜಾಗೃತಿ ಉಂಟುಮಾಡಲು ಪ್ರಯತ್ನಿಸಿದ್ದಾರೆ. ಬಸವಣ್ಣನವರು ನಡೆ-ನುಡಿಗೆ ಹೆಚ್ಚಿನ ಪ್ರಾಧ್ಯಾನ್ಯತೆ ಕೊಟ್ಟು ''ನಡೆದಂತೆ ನುಡಿ, ನುಡಿದಂತೆ ನಡೆದರೆ ಈ ಜನ್ಮವೇ ಕಡೆ'' ಎಂದು ಸಾರಿದ್ದಾರೆ. ಅವರ ವಿಚಾರಗಳಲ್ಲಿ ಅಂತರಂಗ-ಬಹಿರಂಗ ಎರಡರಲ್ಲೂ ಏಕತೆ ಇರುವುದು ಪ್ರಮುಖವಾಗಿದೆ. ಬಸವಣ್ಣನವರು ಜೀವನಕ್ಕೆ ಸಹಜವಾಗಿ, ಸರಳವಾಗಿ ನಿಲುಕುವ ಸಂಗತಿಗಳನ್ನು ಜನಮನದ ಮುಂದೆ ತಂದು ''ಇದು ಸಾಧ್ಯವೆಂದು'' ಹೇಳಿ ಹೊಸತನದ ಜೀವನಕ್ಕೆ ಒಲಿಸಿದರು. ಮಾನವನ ಸಂಪೂರ್ಣ ಜೀವನ ಮಮತೆಯ ಮೇಲೆ ನಿಂತಿದೆ ಎಂಬ ಅವಿರಳ ಜ್ಞಾನವನ್ನು ಪಸರಿಸಿದ ಬಸವಣ್ಣನವರು ಜೀವನ ಜ್ಯೋತಿಯಾಗಿ ಎಂದೆಂದಿಗೂ ಕಂಗೊಳಿಸುವ ವ್ಯಕ್ತಿತ್ವ ಹೊಂದಿದ್ದಾರೆ.

ಬಸವಣ್ಣನವರು ಆಧ್ಯಾತ್ಮಿಕ ಜೀವಿ, ಸಮಾಜ ಜೀವಿ ಮತ್ತು ಆರ್ಥಿಕ ಜೀವಿ, ಜೊತೆಗೆ ಶೈಕ್ಷಣಿಕ ಚಿಂತಕ. ಆದರೆ ವಚನಕಾರರ ಶೈಕ್ಷಣಿಕ ಮೌಲ್ಯಗಳು ಜನರಿಗೆ ಸಾಕಷ್ಟು ಪರಿಚಯವಾಗಿಲ್ಲ. ಇದು ದುರದೃಷ್ಟಕರವಾದ ಸಂಗತಿ. ವಚನಕಾರರ ಪ್ರಕಾರ ಶಿಕ್ಷಣ ವ್ಯಕ್ತಿಗೆ ತನ್ನನ್ನು ತಾನು ಕನ್ನಡಿಯ ಮುಂದೆ ನಿಂತು ತನ್ನ ಬಾಹ್ಯ ಸೌಂದರ್ಯವನ್ನು ನೋಡಿಕೊಳ್ಳುವಂತೆ, ತನ್ನ ಆಂತರಿಕ ಸೌಂದರ್ಯವನ್ನು ನೋಡಿಕೊಳ್ಳುವ ಸಾಮರ್ಥ್ಯವನ್ನು ಕೊಡಬೇಕು. ಅಂದರೆ ಶಿಕ್ಷಣ ವ್ಯಕ್ತಿಯಲ್ಲಿರುವ 'ಅರಿವು' ಅವನಿಗೆ ಗುರುವಾಗುವಂತಹ ಹಂತಕ್ಕೆ ಕರೆದೊಯ್ಯಬೇಕು. ಈ ಅಖಂಡತೆಯ ಅರಿವನ್ನು ಮೂಡಿಸುವ ಹಾದಿಗೆ ಶಿಕ್ಷಣ ಕರೆದೊಯ್ದು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಬೇಕು.

ಪ್ರಾಚೀನ ಕಾಲದಲ್ಲಿನ ಶಿಕ್ಷಣದ ಪರಂಪರೆಯನ್ನು ಗಮನಿಸಿದಾಗ ಗುರುಕುಲಗಳಲ್ಲಿ ವಿದ್ಯಾರ್ಜನೆಗಾಗಿ ಬಂದ ಶಿಷ್ಯರನ್ನು ಗುರು ನೇರವಾಗಿ ಪಾಠ ಪ್ರವಚನಗಳಿಗೆ ಒಳಪಡಿಸದೆ, ಬಾಹ್ಯ ಚಟುವಟಿಕೆಗಳಲ್ಲಿ ತೊಡಗಿಸುತ್ತಾ ಅವರ ಶ್ರದ್ಧೆ ಆಸಕ್ತಿಯನ್ನು ಗಮನಿಸಿ ವಿದ್ಯಾರ್ಜನೆಯನ್ನು ಕೈಗೊಳ್ಳುತ್ತಿದ್ದರು. ಶಿಷ್ಯರ ವಿದ್ಯಾರ್ಜನೆ ಮುಗಿದ ನಂತರ ಗುರುಗಳು ಲೋಕ ಸಂಚಾರ ಕೈಗೊಳ್ಳಲು ಶಿಷ್ಯರಿಗೆ ಆಜ್ಞೆ ಮಾಡುತ್ತಿದ್ದರು. ಅಂದರೆ ವಿದ್ಯಾರ್ಥಿ ತಾನು ಕಲಿತ ವಿದ್ಯೆಯನ್ನು ಲೋಕಸಂಚಾರದಲ್ಲಿ ತೊಡಗಿಸಿಕೊಂಡು ಅನುಭವದ ಮೂಲಕ ನಿಜವಾದ ವಿದ್ಯೆಯನ್ನು ಕಲಿಯಬೇಕಾಗಿತ್ತು. ಅದು ಅಂದಿನ ಶಿಕ್ಷಣದ ಮುಖ್ಯ ಗುರಿಯಾಗಿತ್ತು.

ನಾವು ಇಂದಿನ ಶೈಕ್ಷಣಿಕ ಪರಂಪರೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಶಿಕ್ಷಣವೆಂಬ ರಂಗಭೂಮಿಯಲ್ಲಿ ಮುಖ್ಯಪಾತ್ರ ವಹಿಸಬೇಕಾದ ಗುರು ಮತ್ತು ಶಿಷ್ಯರ ಪಾತ್ರಗಳು ಕುರುಡನ ಕೈಯ್ಯ ಕುರುಡಹಿಡಿದಂತೆ ಎಂಬುದನ್ನು ನೆನಪಿಸುವಂತಿದೆ. ಇಂದಿನ ಶಿಕ್ಷಣದ ಪ್ರಕ್ರಿಯೆಯಲ್ಲಿ ಶಿಕ್ಷಕ ಮತ್ತು ವಿದ್ಯಾರ್ಥಿ ಇಬ್ಬರೂ ಕುರಡರಾಗಿರುವಂತೆ ಭಾಸವಾಗುತ್ತದೆ. ಇದೇ ಸಂದರ್ಭದಲ್ಲಿ ಶ್ರೀ ಗೋಪಾಲಕೃಷ್ಣ ಅಡಿಗರ ಮಾತು ಇಲ್ಲಿ ಸೂಕ್ತವೆನಿಸುತ್ತದೆ. ಅದು, ''ಕುರುಡನ ಹೆಗಲ ಮೇಲೆ ಹೆಳವ ಕುಳಿತಿದ್ದಾನೆ; ದಾರಿ ಸಾಗುವುದೆಂತೋ ?'' ಎಂಬ ಮಾತು ಶಿಕ್ಷಣ ವ್ಯವಸ್ಥೆಯ ಅಸಂಪೂರ್ಣತೆಯನ್ನು ಪ್ರತಿಬಿಂಬಿಸುವಂತಿದೆ. ಹೊಸ ಸಮಾಜವೊಂದನ್ನು ನಿರ್ಮಾಣಮಾಡಿ, ಶಕ್ತಿಯುತವಾದ ರಾಷ್ಟ್ರವನ್ನು ಕಟ್ಟಬೇಕಾದರೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಗಿಬ್ಬರಿಗೂ ನಿಜವಾದ ಶಿಕ್ಷಣ ಕೊಡಬೇಕು.

ವ್ಯಕ್ತಿಯ ಕಲಿಕೆ ಕೇವಲ ವಿಜ್ಞಾನ, ಗಣಿತ, ಸಮಾಜ ವಿಜ್ಞಾನ, ಕಂಪ್ಯೂಟರ್ ಮುಂತಾದ ಇತರ ಸೀಮಿತ ವಿಷಯಗಳಿಗೆ ಮಾತ್ರ ನಿಲ್ಲಬಾರದು. ವ್ಯಕ್ತಿ ಅನುಭವದ

ಮೂಲಕ ನಿರಂತರವಾಗಿ ಕಲಿಯುವಂತಿರಬೇಕು. ವಿದ್ಯಾರ್ಥಿ ಎಂಬ ಶಬ್ದ ಕೇವಲ ಸೀಮಿತ ಹಂತದವರೆಗಿನ ಔಪಚಾರಿಕ ಕಲಿಕೆಗೆ ಮಾತ್ರ ಅನ್ವಯಿಸದೆ ಜೀವನಪರ್ಯಂತವಾಗಿ ಅನುಭವದ ಮೂಲಕ ಕಲಿಯುತ್ತಿರುವವನೇ ವಿದ್ಯಾರ್ಥಿ. ಹೀಗೆ ಜೀವನದುದ್ದಕ್ಕೂ ಅನುಭವದಿಂದ ಕಲಿತ ಪಾಠ ಮನುಷ್ಯನಲ್ಲಿ ಸುಂದರವಾದ ವ್ಯಕ್ತಿತ್ವದ ನಿರ್ಮಾಣಕ್ಕೆ ಅಡಿಪಾಯವಾಗುತ್ತದೆ. ಅಂತಹ ಅನುಭವದ ಮಾತುಗಳನ್ನು ಶಿಕ್ಷಣಕ್ಕೆ ಸಂಬಂಧಿಸಿದಂತೆ ವಚನಕಾರರಾದ ಬಸವಣ್ಣನವರು ತಮ್ಮ ವಚನಗಳಲ್ಲಿ ವ್ಯಾಖ್ಯಾನಿಸಿದ್ದಾರೆ.

''ಶಿವಪಥವರಿವೆಡೆ ಗುರು ಪಥವೇ ಮೊದಲು'' ಎಂಬ ಮಾತು ಗುರುವಿನ ಮಹತ್ವವನ್ನು ಸಾರುತ್ತದೆ. ಶ್ರೇಷ್ಠವಾದ ಗುರು ತನ್ನ ಶಿಷ್ಯರಿಗೆ ಸರಿಯಾದ ಮಾರ್ಗವನ್ನು ಸೂಚಿಸಿ ಸತ್ಯದ ಅರಿವನ್ನು ಕಂಡುಕೊಳ್ಳುವಂತೆ ಮಾಡಬೇಕು. ಈ ರೀತಿ ಸತ್ಯದ ಅರಿವನ್ನು ಮೂಡಿಸಲು ಬೇಕಾದ ಮಾಧ್ಯಮ 'ಮಾತು'. ಆ ಮಾತು ಹೇಗಿರಬೇಕು ಎಂಬುದನ್ನು ವಚನಕಾರರಾದ ಬಸವಣ್ಣನವರು ಬಣ್ಣಿಸುವುದು ಹೀಗೆ :

*ನುಡಿದರೆ ಮುತ್ತಿನ ಹಾರದಂತಿರಬೇಕು*
*ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು*
*ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು*

ಈ ಸಾಲುಗಳು ಮಾತಿನ ಮಹತ್ವವನ್ನು ಸಾರುತ್ತವೆ. ಸ್ವಾಮಿ ವಿವೇಕಾನಂದರಿಗೆ ತಮ್ಮ ಗುರು ರಾಮಕೃಷ್ಣ ಪರಮಹಂಸರ ಸ್ಪರ್ಶದಿಂದ ಮತ್ತು ಪ್ರಭಾವದಿಂದ ಜ್ಞಾನೋದಯವಾಯಿತು, ಬುದ್ಧನಿಗೆ ತಪಸ್ಸಿನ ಮೂಲಕ ಅರಿವು ಉಂಟಾಯಿತು. ಹಾಗೆಯೇ ನಮ್ಮ ಮಾತು ಸಹ ಈ ರೀತಿಯ ಅರಿವನ್ನು ಉಂಟುಮಾಡುವಂತಿರಬೇಕು. ಬಸವಣ್ಣನವರ ಪ್ರಕಾರ ಮಾತು ವ್ಯಕ್ತಿಯ ಅಂತರಾಳದ ಕಣ್ಣುಗಳನ್ನು ತೆರೆಯುವಂತಿರಬೇಕು. ಹೀಗೆಯೇ ಮುಂದುವರೆದು ಅಲ್ಲಮಪ್ರಭುಗಳು 'ಮಾತೇ ಜ್ಯೋತಿರ್ಲಿಂಗ' ಎಂದು ಹೇಳಿ ಮಾತಿಗಿರುವಂತಹ ಆಧ್ಯಾತ್ಮಿಕ ಶಕ್ತಿಯನ್ನು ಇನ್ನಷ್ಟು ಪ್ರಕಾಶಮಾನಗೊಳಿಸಿದ್ದಾರೆ.

ಗುರು-ಶಿಷ್ಯರ ಸಂಬಂಧ, ಮೌಲ್ಯಗಳು ಹಾಗೂ ಪರಂಪರೆಯನ್ನು ಅಲ್ಲಮಪ್ರಭುಗಳು ಈ ರೀತಿ ವ್ಯಾಖ್ಯಾನ ಮಾಡಿದ್ದಾರೆ :

*''ಕೃತಯುಗದಲ್ಲಿ । ಶ್ರೀ ಗುರು ಶಿಷ್ಯಂಗೆ ಬಡಿದು ।*
*ಬುದ್ಧಿಯ ಕಲಿಸಿದರೆ - ಆಗಲಿ ಮಹಾಪ್ರಸಾದವೆಂದನಯ್ಯಾ*
*ತ್ರೇತಾಯುಗದಲ್ಲಿ । ಶ್ರೀ ಗುರು ಶಿಷ್ಯಂಗೆ ಬೈದು ।*
*ಬುದ್ಧಿಯ ಕಲಿಸಿದರೆ - ಆಗಲಿ ಮಹಾಪ್ರಸಾದವೆಂದನಯ್ಯಾ*
*ದ್ವಾಪರಯುಗದಲ್ಲಿ । ಶ್ರೀ ಗುರು ಶಿಷ್ಯಂಗೆ ಝುಂಕಿಸಿ ।*
*ಬುದ್ಧಿಯ ಕಲಿಸಿದರೆ - ಆಗಲಿ ಮಹಾಪ್ರಸಾದವೆಂದನಯ್ಯಾ*
*ಕಲಿಯುಗದಲ್ಲಿ । ಶ್ರೀ ಗುರು ಶಿಷ್ಯಂಗೆ ವಂದಿಸಿ*
*ಬುದ್ಧಿಯ ಕಲಿಸಿದರೆ - ಆಗಲಿ ಮಹಾಪ್ರಸಾದವೆಂದನಯ್ಯಾ*
*ಗುಹೇಶ್ವರ, ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆನು.''*

ಶೈಕ್ಷಣಿಕ ವಿಷಯಕ್ಕೆ ಸಂಬಂಧಿಸಿದ ಅಲ್ಲಮನ ಈ ವಚನ ವಿವಿಧ ಕಾಲ ಘಟ್ಟಗಳಲ್ಲಿ ಬದಲಾಗುತ್ತಿರುವ ಶಿಕ್ಷಣದ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ತ್ರಿಕಾಲ ಜ್ಞಾನಿಯಾದ ಅಲ್ಲಮ, ವಿವಿಧ ಯುಗಗಳಲ್ಲಿ ಗುರು ಶಿಷ್ಯರ ಸಂಬಂಧವು ಎಂತಹ ಸ್ಥಾನವನ್ನು ಪಡೆದಿತ್ತು ಎಂಬುದನ್ನು ಸೂಚಿಸುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಗುರುವಿನ ಸ್ಥಾನ ಅತ್ಯಂತ ಪ್ರಮುಖವಾದುದು ಕಾಲಚಕ್ರ ಉರುಳಿದ ಹಾಗೆ, ಹೇಗೆ ಉನ್ನತ ಮೌಲ್ಯಗಳು ಹೀನಾಯಿಸಲ್ಪಡುತ್ತವೆ ಎಂಬುದನ್ನು ಗಮನಿಸಬಹುದು.

ಆದಿಯುಗವೆನಿಸಿಕೊಂಡಿರುವ ಕೃತಯುಗದಲ್ಲಿ ಗುರುವಿಗೆ ಇದ್ದಂತಹ ಸರ್ವಾಧಿಕಾರವನ್ನು ಕಾಣಬಹುದು. ಗುರು ನಡೆದಾಡುವ ವಿಶ್ವಕೋಶವಿದ್ದಂತೆ. ಜೊತೆಗೆ ವಿದ್ಯಾರ್ಥಿಯ ಶ್ರೇಯೋಭಿವೃದ್ಧಿಗಾಗಿ ಗುರು ತನ್ನೆಲ್ಲಾ ವಿದ್ಯೆಯನ್ನು ಧಾರೆಯೆರೆಯುವಂತಹ ತ್ಯಾಗಪರನಾಗಿದ್ದ. ನಂತರ ಕಾಲಘಟ್ಟ ಸರಿದು, ತ್ರೇತಾಯುಗಕ್ಕೆ ಬಂದಾಗ ಗುರುವಿನ ಸ್ಥಾನ ಸ್ವಲ್ಪ ಮಟ್ಟಿಗೆ ಕುಸಿಯಿತು. ಪೂರ್ಣ ಅಧಿಕಾರವಿಲ್ಲದಿದ್ದರೂ ಶಿಷ್ಯನನ್ನು ಬೈಯ್ದು ದಂಡಿಸುವ ಸಾಮರ್ಥ್ಯ ಗುರುವಿಗಿತ್ತು. ಆದರೆ ಗುರುವಿನ ಪದಚ್ಯುತಿ ಹೇಗಾಯಿತು ಎಂದು ತಿಳಿದುಕೊಳ್ಳಬಹುದು. ಮುಂದೆ ಕಲಿಯುಗದಲ್ಲಿ ಗುರುವಿನ ಸ್ಥಾನವನ್ನು ವಿಶ್ಲೇಷಿಸಿದರೆ ಗುರು ತನ್ನ ಸರ್ವಾಧಿಕಾರವನ್ನು ಬಿಟ್ಟುಕೊಡುವ ಪರಿಸ್ಥಿತಿ, ಶಿಷ್ಯ ಕೇಂದ್ರಿತವಾದ ವ್ಯವಸ್ಥೆ. ವಿದ್ಯಾರ್ಥಿಗೆ ಗುರು ಬಹಳ ವಿನಯಪೂರ್ವಕವಾಗಿ ಮತ್ತು ನಯವಾಗಿ ಕಲಿಸುವ ವ್ಯವಸ್ಥೆ ಉಂಟಾಯಿತು.

ಬದಲಾಗುತ್ತಿರುವ ಗುರು-ಶಿಷ್ಯರ ಸಂಬಂಧವನ್ನು ಕುರಿತಂತೆ ನಾವು ಮೊದಲಿಗೆ ಎತ್ತುವ ನುಡಿ ಎಂದರೆ ಶಿಕ್ಷಣ ವ್ಯವಸ್ಥೆ, ಅದು ನಿಧಾನವಾಗಿ ಕೆಳಮಟ್ಟಕ್ಕಿಳಿಯುತ್ತಿದೆ, ವಿದ್ಯಾರ್ಥಿಗಳಿಗೆ ಆಸಕ್ತಿ ಇಲ್ಲ ಎಂಬೆಲ್ಲ ಋಣಾತ್ಮಕ ಅಂಶಗಳು ಕೇಳಿ ಬರುತ್ತಿವೆ. ಆದರೆ ಇದೇ ಜೀವನಕ್ರಮ, ಶಿಕ್ಷಣ ವ್ಯವಸ್ಥೆ ಜೀವನಕ್ಕೆ ಅದರ ನೇರ ಅನ್ವಯ, ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತಿ, ಗುರುವಿನ ಪಾಂಡಿತ್ಯ, ಆಸಕ್ತಿ, ಕಳಕಳಿ ಇತ್ಯಾದಿಗಳನ್ನು ಗಮನಿಸುತ್ತಾ ಹೋದಂತೆ ಬದಲಾಗುತ್ತಿರುವ ಈ ಗುರು ಶಿಷ್ಯರ ಸಂಬಂಧಕ್ಕೆ ಯಾರೊಬ್ಬರು ಮಾತ್ರ ಕಾರಣವಾಗಿರದೆ ನಮ್ಮ ಸಾಮಾಜಿಕ ಸ್ವರೂಪವೆ ಕಾರಣವಾಗುತ್ತದೆ





ಎಂದು ಹೇಳಬಹುದು. ಒಳ್ಳೆಯ ಆಧ್ಯಾತ್ಮಿಕ ಪರಂಪರೆಯಿಂದ ಇಂದು ಹೀನಾಯ ಸ್ಥಿತಿಗೆ ಬರಲು ಕಾರಣಗಳನ್ನು ಪ್ರತಿಯೊಬ್ಬರೂ ಕಂಡುಕೊಳ್ಳಬೇಕಾದಂತಹ ಅಗತ್ಯವಿದೆ.

ಸಾಮಾಜಿಕ ಮೌಲ್ಯಗಳ ಅಂಕುಡೊಂಕುಗಳನ್ನು ಪ್ರಸ್ತಾಪಿಸುತ್ತಾ ಈ ವಚನವನ್ನು ಬಸವಣ್ಣನವರು ಪ್ರಸ್ತುತಪಡಿಸಿದ್ದಾರೆ.

*ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ*
*ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ.*

ಈ ವಚನವು ಜೀವನದ ಮೌಲ್ಯಗಳನ್ನು ವಿಮರ್ಶಿಸುತ್ತದೆ. ಶಿಕ್ಷಣದ ಉದ್ದೇಶ, ಮನುಷ್ಯ ಪರಿಪೂರ್ಣವಾದ ಜೀವನವನ್ನು ನಡೆಸಲು ಬೇಕಾದ ಸದ್‌ವರ್ತನೆಯನ್ನು ಬೆಳೆಸಬೇಕು. ಮಾತುಗಳು ವ್ಯಕ್ತಿಯ ಅಂತರಂಗವನ್ನು ಮತ್ತು ಬಹಿರಂಗವನ್ನು ಶುದ್ಧಿಯಾಗಿಡಬೇಕು. ಈ ಎಲ್ಲಾ ವಚನಗಳ ಸಾರ ಇಂದಿನ ವಿದ್ಯಾರ್ಥಿ ಪೀಳಿಗೆಗೆ ತಲುಪಬೇಕು.

ಬಸವಣ್ಣನವರು ಸಮಾಜವನ್ನು ವಿಡಂಬನೆ ಮಾಡಿರುವುದಕ್ಕಿಂತ ಹೆಚ್ಚಾಗಿ ಆತ್ಮವಿಮರ್ಶೆ ಮಾಡಿಕೊಂಡವರಲ್ಲಿ ಮೊದಲಿಗರು. ಕೆಲವು ವಚನಗಳಲ್ಲಿ ಸಮಾಜದ ವ್ಯಕ್ತಿಗಳನ್ನು ಕುರಿತು ವಿಡಂಬನೆ ಮಾಡುತ್ತಾ ಮನುಷ್ಯನಿಗಿರಬೇಕಾದ ಮಾನವೀಯ ಮೌಲ್ಯವನ್ನು ಕುರಿತು ಹೇಳಿದ್ದಾರೆ.

*ಏನು ಬಂದಿರಿ ಹದುಳವಿದ್ದಿರೆ ? ಎಂದರೆ*
*ನಿಮ್ಮ ಮೈಸಿರಿ ಹಾರಿಹೋಹುದೆ ?*
*ಕುಳ್ಳಿರೆಂದರೆ ನೆಲ ಕುಳಿ ಹೋಹುದೆ ?*
*ಒಡನೆ ನುಡಿದರೆ ನೆರೆ ಹೊಟ್ಟೆಯೊಡೆವುದೆ ?:*

ಎಂಬ ಪ್ರಶ್ನೆಗಳನ್ನು ಕೇಳುತ್ತಾ, ಬಂದ ಅತಿಥಿಗಳಿಗೆ ಆತಿಥ್ಯವನ್ನು ನೀಡದಿದ್ದರೂ ಸೌಜನ್ಯಕ್ಕಾಗಿಯಾದರೂ ಒಳ್ಳೆಯ ಮಾತುಗಳನ್ನು ಆಡುವ ಗುಣವಿಲ್ಲದಿದ್ದರೆ ಮನುಷ್ಯತ್ವಕ್ಕೆ ಬೆಲೆಯೇ ಇಲ್ಲದಂತಾಗುತ್ತದೆ, ಎಂಬ ನೀತಿಯನ್ನು ಹೇಳುತ್ತಾ ಮಾನವೀಯತೆಯ ಗುಣಗಳನ್ನು ಬೆಳೆಸಿಕೊಳ್ಳಿ ಎಂದು ಬಸವಣ್ಣನವರು ಸಮಾಜವನ್ನು ಉದ್ದೇಶಿಸಿ ಹೇಳಿದ್ದಾರೆ. ಇದು ನಾವು ಇಂದು ಸಂಸ್ಕೃತಿಯ ಬೆಳವಣಿಗಾಗಿ ಶಿಕ್ಷಣವೆಂಬ ಮಾತಿಗೆ ಹಿಡಿದಂತಹ ಕನ್ನಡಿಯಾಗಿದೆ.

ಇಂದು ಧರ್ಮದ ಹೆಸರಿನಲ್ಲಿ ಮನುಷ್ಯ ಮನುಷ್ಯನನ್ನೇ ಜೀವಂತವಾಗಿ ಕಿತ್ತು ತಿನ್ನುವ ಪರಿಸ್ಥಿತಿ ನಿರ್ಮಾಣವಾಗಿದೆ. ಆದ್ದರಿಂದಲೇ ಬಸವಣ್ಣನವರು ದಯೆ ಇಲ್ಲದ ಧರ್ಮ ಅದಾವುದಯ್ಯಾ ಎಂದು ಹೇಳಿದ್ದಾರೆ. ಆದರೆ ಸಮಾಜದಲ್ಲಿ ನಡೆಯುತ್ತಿರುವ ಜೀವಂತ ಕ್ರೌರ್ಯಗಳನ್ನು ವೀಕ್ಷಿಸಿದಾಗ ನಾವು ನಡೆಯುತ್ತಿರುವ ದಾರಿಯ ಬಗ್ಗೆ ಸಂದೇಹವುಂಟಾಗುತ್ತದೆ. ನಾವು ನಾಗರೀಕತೆಯನ್ನು ಮೈಗೂಡಿಸಿಕೊಂಡು ಸಂಸ್ಕೃತಿಯನ್ನು ಮರೆತಂತಿದೆ. ಇದಕ್ಕೆ ಕಾರಣಗಳೆಂದರೆ ಆಧುನೀಕರಣ, ನಗರೀಕರಣ, ಕಂಪ್ಯೂಟರೀಕರಣ ಇವುಗಳಿಂದ ಪ್ರಪಂಚದಿಂದ ದೂರ ಸರಿಯುತ್ತಾ ಯಾಂತ್ರಿಕವಾದ ಬದುಕಿಗೆ ಮೈಕೊಟ್ಟು ನಿಂತಿದ್ದಾರೆ. ಮನುಷ್ಯನಿಗೆ ಅಹಂಕಾರ ತುಂಬಿದೆ, ಆದರೆ ಪ್ರಕೃತಿ ಅವನನ್ನು ಸದಾ ಎಚ್ಚರಿಸುತ್ತಿದೆ, ಸವಾಲೊಡ್ಡುತ್ತಿದೆ. ಈ ಅಂಶವನ್ನು ಜೇಡರ ದಾಸಿಮಯ್ಯನವರು ಈ ಕೆಳಗಿನ ಪ್ರಸ್ತುತಪಡಿಸುತ್ತಾರೆ.

*ಒರತೆಗಳ ಕಂಡಿಂತು ಕೆಲವು ಬಾವಿಯ ತೋಡೆಂಬರು*
*ಅರವಟಿಕೆ ಛತ್ರವು ತಮ್ಮದೆಂಬರು*
*ಪಮಿರ್ಯೆದದಿರೆ ಮಳೆಯ ಸುರಿಸದಿದ್ದರೆ*
*ಅವರೇತರಲ್ಲಿ ನೀಡುವರಯ್ಯಾ ರಾಮನಾಥ*

ಈ ವಚನದಲ್ಲಿ ಪ್ರಕೃತಿಯ ಮುಂದೆ ಮನುಷ್ಯ ಕುಬ್ಜನಾಗಿರುವುದನ್ನು ದಾಸಿಮಯ್ಯ ಹೇಳುತ್ತಾ, ಪ್ರಕೃತಿ ಇಲ್ಲದೆ ಮನುಷ್ಯ ಏನನ್ನು ತಾನೇ ಸಾಧನೆ ಮಾಡಬಲ್ಲ ? ಎಂಬ ಪ್ರಶ್ನೆಯನ್ನು ಕೇಳುತ್ತಾ ವಾಸ್ತವತೆಯ ಅರಿವನ್ನು ಮೂಡಿಸಿದ್ದಾನೆ. ಇಂತಹ ಅರಿವನ್ನು ಕೊಡಲು ಆಧುನೀಕರಣ ದಿಂದಾಗಲೀ, ನಗರೀಕರಣದಿಂದಾಗಲಿ ಅಥವಾ ಎಲ್ಲಾ ಸಮಸ್ಯೆಗಳಿಗೂ ಜೀವಿವಿಲ್ಲದ ಯಂತ್ರವಾಗಿರುವ ಕಂಪ್ಯೂಟರ್‌ನಿಂದಾಗಲೀ ಸಾಧ್ಯವೇ ?

ಈ ಎಲ್ಲಾ ಅಂಶಗಳನ್ನು ವಿಶ್ಲೇಷಿಸಿದಾಗ ನಮಗೆ ತಿಳಿದು ಬರುವ ಕಟು ಸತ್ಯವೆಂದರೆ ಮನುಷ್ಯ ಪ್ರಜ್ಞಾವಂತನಾಗಿ ಬಾಳಬೇಕಾದರೆ ಅವನಿಗೆ ಬೇಕಾಗಿರುವುದು ಅತ್ಯುತ್ತಮ ಶಿಕ್ಷಣ. ಅಂತಹ ಶಿಕ್ಷಣ ಪ್ರಾಚೀನ ಸಮಾಜದಲ್ಲಿ ಗುರುಕುಲಗಳಲ್ಲಿ ಅನುಷ್ಠಾನದಲ್ಲಿತ್ತು ಎಂಬುದು ಒಂದು ಐತಿಹ್ಯ. ಇಂದು ಅಂತಹ ಶಿಕ್ಷಣವನ್ನು ಕೊಡುವುದರಲ್ಲಿ ನಾವೂ ವಿಫಲರಾಗಿದ್ದೇವೆಯೆ? ಅದನ್ನು ಆಚರಣೆಗೆ ತರಲು ನಾವು ಹಾಕಿಕೊಂಡಿರುವ ಮಾರ್ಗಗಳಿಂದ ಸಾಧ್ಯವೇ ? ಇಂತಹ ಯಾಂತ್ರಿಕ ಬದುಕನ್ನು ಮೈಗೂಡಿಸಿಕೊಂಡಿರುವ ನಮಗೆ ಮೌಲ್ಯಗಳ ಸುಗಂಧವನ್ನು ಲೇಪನ ಮಾಡುವುದು ಹೇಗೆ ? ಇದು ಇಂದಿನ ಶಿಕ್ಷಣ ವ್ಯವಸ್ಥೆಯಿಂದ ಸಾಧ್ಯವಾಗುತ್ತದೆಯೇ ? ಎಂಬುದನ್ನು ಕಾಯ್ದು ನೋಡಬೇಕಾಗಿದೆ.

*

## ಪರಿಸರ ಮತ್ತು ಮಾನವ

- ಈರಯ್ಯ ಕಿಲ್ಲೇದಾರ 'ಈನಿಂಕಿ'
ಕವಿತಾ ಪ್ರಕಾಶನ,
ಗುಡಿಕಟ್ಟಿ- ೫೯೧೧೦೪, ಜಿ. ಬೆಳಗಾವಿ

ಮನುಷ್ಯ ಪರಿಸರದ ಕೂಸು. ಪರಿಸರದೊಡನೆ ತಾಯಿ ಮತ್ತು ಮಗುವಿನ ಬಾಂಧವ್ಯ ಮನುಷ್ಯನಿಗಿದೆ. ಪರಿಸರವನ್ನು ಆರಾಧಿಸುವ ಕಾಲ ಒಂದತ್ತು. *'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ, ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ ಸುತ್ತುವರಿದ ಸಾಗರವೆಲ್ಲ ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳೇನೆಂಬೆ ರಾಮನಾಥಾ'. ಇದು ಕಾರಣ ಜೇಡರ ದಾಸಿಮಯ್ಯನ ವಚನ'.* ಈ ಭೂಮಿ, ಈ ಬೆಳೆ, ಬೀಸುವ ಗಾಳಿ, ಸುರಿಯುವ ಮಳೆ, ಸುತ್ತುವರೆದ ಸಮುದ್ರ ಎಲ್ಲವೂ ದೇವರ ಕೊಡುಗೆ. ಈ ಪರಿಸರವೆಲ್ಲವೂ ಕೇವಲ ಮನುಷ್ಯನ ಉಪಯೋಗಕ್ಕಾಗಿ ಎಂದು ಬೀಗುತ್ತಿದ್ದಾನೆ. ಸಕಲ ಜೀವರಾಶಿಗಳ ಹಿತಕ್ಕಾಗಿ ಇರುವ ಪರಿಸರವನ್ನು ಹಾಳು ಮಾಡುವಲ್ಲಿ ಮನುಷ್ಯನ ಪಾತ್ರ ದೊಡ್ಡದಾಗಿದೆ. ಔದ್ಯೋಗೀಕರಣ ಮತ್ತು ರಾಸಾಯನಿಕಗಳ ಪರಿಣಾಮವಾಗಿ ಓಝೋನ್ ಪದರಿನಲ್ಲಿ ಚೀನಾ ದೇಶದ ಎರಡು ಪಟ್ಟು ವಿಶಾಲವಾದ ತೂತಾಗಿದೆಯಂತೆ ! ಭೂಕಂಪ, ಅತಿವೃಷ್ಟಿ, ಅನಾವೃಷ್ಟಿ, ಅತಿಪ್ರಖರವಾದ ಬಿಸಿಲು ಇವೆಲ್ಲ ಪರಿಸರ ನಾಶವಾಗುವ ಬಗ್ಗೆ ಎಚ್ಚರಿಕೆಯ ಗಂಟೆಗಳಾಗಿವೆ.

ಪರಿಸರದ ಮೇಲೆ ಮಾನವನ ಆಕ್ರಮಣ ಮತ್ತು ಅತ್ಯಾಚಾರದ ಫಲವಾಗಿ ತಾಯಿಯ ಎದೆ ಹಾಲಿನಲ್ಲೂ ವಿಷ ಬೆರೆತು ಹೋಗಿದೆ. ಮಹಾದಾನಿಯ ಕೊಡುಗೆಯಾದ ಪರಿಸರವನ್ನು ಗೌರವಿಸುವ ಕಾಲ ಹಿಂದೆ ಇತ್ತು. ಗಿಡ, ಮರ, ಕಲ್ಲು, ಭೂಮಿ, ನದಿ, ವಾಯು, ಸೂರ್ಯ ಮತ್ತು ಚಂದ್ರರನ್ನು ದೇವ ಭಾವನೆಯಿಂದ ಪೂಜಿಸುತ್ತಿದ್ದರು. ಹಿಂದಿನ ಜನ ಮೂಢನಂಬಿಕೆಯುಳ್ಳವರು ಎಂದು ಅವರಲ್ಲಿದ್ದ ಗೌರವವನ್ನು ಇಂದಿನ ವಿಜ್ಞಾನಿಗಳೆನಿಸಿಕೊಂಡವರು ಕೀಳಾಗಿಕಂಡರು. ಅಷ್ಟೇ ಅಲ್ಲ ಈ ವೈಜ್ಞಾನಿಕ ಸಂಶೋಧನೆಯಿಂದ ತಾಯಿಯ ಒಡಲಿಗೆ ಕೊಡಲಿ ಹಿಡಿದ ರಾಕ್ಷಸಿ ವೃತ್ತಿಯ ನಾಗರಿಕರು ಪ್ರಪಂಚವನ್ನೇ ವಿನಾಶದ ಅಂಚಿಗೆ ತಲುಪಿಸಿದ್ದಾರೆ. ಇತರರ ಒಳಿತಿನಲ್ಲಿ ತಮ್ಮ ಒಳಿತೂ ಇದೆ ಎಂಬ ಭಾವನೆಯನ್ನು ಪಲ್ಲಟಗೊಳಿಸಿ ತಾನೊಬ್ಬ ಬದುಕಿದರಾಯಿತು. ತನಗೊಬ್ಬಗೆ ಲೇಸಾದರಾಯಿತು ಉಳಿದವರೇನಾದರೂ ಆಗಲಿ ಎನ್ನುವ ಸ್ಥಿತಿಗೆ ಬಂದಿದ್ದಾನೆ. ಇದೆಲ್ಲ ವೈಜ್ಞಾನಿಕ ಮನೋಭಾವದ ಪ್ರಗತಿಪರ ನಿಲುವಿನ ನಾಗರಿಕ ಮನುಷ್ಯನ ಹೇಯ ಕೃತ್ಯವಾಗಿದೆ.

ಗಣಿಗಾರಿಕೆಯಿಂದ ಭೂಗರ್ಭವನ್ನು ಅಗಿದಗಿದು ಬಗಿದು ವಸುಂಧರೆಯನ್ನು ಎಲುಬಿನ ಗೂಡಾಗಿಸಲಾಗಿದೆ. ಎಲ್ಲದಕ್ಕೂ ಹೆಚ್ಚುತ್ತಿರುವ ಜನಸಂಖ್ಯೆಯನ್ನೇ ಬೊಟ್ಟು ಮಾಡಿ ತೋರಿಸುತ್ತಾರೆ. ಆದರೆ ಈ ಮಾತು ಅರ್ಧಸತ್ಯವಾಗಿದೆ. ಆಧುನಿಕ ಮನುಷ್ಯ ಆಕಳ ಕೆಚ್ಚಲವನ್ನು ಕೊಯ್ಯಲು ಹೊರಟಿದ್ದಾನೆ. ಆಶೆ ಇರಲಿ ಆದರೆ ಅತಿಯಾಶೆಯಿಂದ ದುರಾಶೆಯಿಂದ ಒಂದೆ ದಿನ ಎಲ್ಲ ಹಾಲನ್ನು ಪಡೆಯಲು ಹೊರಟಿದ್ದಾನೆ. 'ಮನುಷ್ಯನ ಮತ್ತು ಸಕಲ ಜೀವರಾಶಿಗಳ ಅಗತ್ಯಗಳನ್ನು ಪೂರೈಸಬಲ್ಲ ಶಕ್ತಿ ಭೂಮಿ ತಾಯಿಗೆ ಇದೆ. ಆದರೆ ಮನುಷ್ಯನ ಅತಿಯಾಸೆಯನ್ನು ಈಡೇರಿಸುವ ಶಕ್ತಿ ಭೂಮಿ ತಾಯಿಗಿಲ್ಲ'. ಇದು ಮಹಾತ್ಮಾ ಗಾಂಧೀಜಿಯವರು ಹೇಳಿದ ಸತ್ಯ ಮಾತು. ದಿಢೀರನೆ ಶ್ರೀಮಂತನಾಗಬೇಕು ಬಹಳಷ್ಟು ಬೆಳೆಯಬೇಕು. ಒಮ್ಮೆಲೆ ಭೂಮಿಯ ಮೇಲಿನ ಭೋಗ ಭಾಗ್ಯಗಳನ್ನು ಪಡೆಯಬೇಕೆಂದು ಮನುಷ್ಯ ಇಂದು ಕ್ರೂರ ಮೃಗ ಆಗಿದ್ದಾನೆ. ಕ್ರೂರ ಮೃಗಗಳಲ್ಲೂ ಒಂದು ಮಾನವೀಯ ಗುಣ ಇದ್ದೀತು. ಆದರೆ ಈ ಮಾನವನಲ್ಲಿ ಮಾನವೀಯ ಗುಣವೇ ಇಲ್ಲದಾಗಿದೆ. ಅತಿಯಾಶೆಯ ಈಡೇರಿಕೆ ಯಾವ ಹಂತಕ್ಕೆ ತಲುಪಿದೆ ಎಂದರೆ ಮಾನವ ತನಗರಿವಿಲ್ಲದಂತೆ ಭಸ್ಮಾಸುರನಾಗುತ್ತಿದ್ದಾನೆ.

ಪರಿಸರದ ಸ್ನೇಹದಿಂದ ಎಲ್ಲವೂ ಒಳಿತಾದೀತು. ಪರಿಸರದೊಡನೆ ವೈರ ಸರಿಯಲ್ಲ. ಪರಿಸರದೊಡನೆ ಹೋರಾಟ ನಡೆಸುತ್ತಿರುವ ನಾವು ಸೋಲುವದು ಖಂಡಿತ. ಸೋಲಿನ ಅನುಭವ ನಮಗೆಷ್ಟೋ ಸಲ ಆಗಿದೆ. ಆದರೆ ಅದನ್ನು ಗಮನಿಸದೆ ಹೊಸ ಹೊಸ ಅಸ್ತ್ರಗಳನ್ನು ಬಳಸುತ್ತಿದ್ದೇವೆ. ಎಷ್ಟಾದರೂ ಪರಿಸರದ ಮುಂದೆ ನಾವು ಸಣ್ಣವರು ಎಂಬ ಮಾತನ್ನು ನೆನಪಿಡಬೇಕು. 'ಹಳ್ಳsದ ದಂಡ್ಯಾಗ ಮೊದಲೀಗಿ ಕಂಡಾಗ ಏನೊಂದ ನಗಿ ಇತ್ತs, ಏಸೊಂದ ನಗಿ ಇತ್ತs ಏರಿಕೆನಗಿ ಇತ್ತs ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ ಹೋಗೇತಿ ಎತ್ತೆತ್ತ ?' ಎಂದು ವರಕವಿ ಬೇಂದ್ರೆಯವರು ತಮ್ಮ ಕವನದಲ್ಲಿ ಪರಿಸರದ ಹಿಂದಿನ ಚೆಲುವಿಕೆಯು ಇಂದಿಲ್ಲದಾಗಿದೆ ಎಂಬುದನ್ನು ಮಾರ್ಮಿಕವಾಗಿ ಹೇಳಿದ್ದಾರೆ. ಮಾವು, ಬೇವು, ಹುಲುಗಲ ಮತ್ತು ನೀರಲ ಮೊದಲಾದ ಗಿಡಮರಗಳು ಹಳ್ಳದ ದಂಡೆಯಲ್ಲಿ ಹಚ್ಚ ಹಸುರಿನಿಂದ ಕಂಗೊಳಿಸುತ್ತಿದ್ದವು. ಹರಿವ ನೀರು ಜುಳು ಜುಳು. ಸಹಜ ಸುಂದರಿಯ ನಗುವಿನಂತೆ ಮಿಂಚುತ್ತಿತ್ತು. ನವ ಯೌವನೆಯಂತೆ ಶೋಭಿಸುವ ಚೆಲುವಿನ ಆ ಹಳ್ಳದ ನೆನಪನ್ನು ಹಸಿರಾಗಿಸಲು ನಾವೆಲ್ಲ ಪ್ರಯತ್ನಿಸಬೇಕಾಗಿದೆ. ಕೇವಲ ನೈಸರ್ಗಿಕ ಪರಿಸರವಷ್ಟೇ ಮಲಿನವಾಗಿಲ್ಲ. ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಪರಿಸರವೂ ಮಲಿನಗೊಂಡಿದೆ. ನೈಸರ್ಗಿಕವಾದ ಪರಿಸರ ಸರಿಯಾಗಿಟ್ಟರೆ ಸಾಲದು. ಸಾಮಾಜಿಕ ಪರಿಸರವೂ ಆರೋಗ್ಯ ಪೂರ್ಣವಾಗಬೇಕು. ಆ ದಿಸೆಯಲ್ಲಿ ನಾವು ಗಮನ ಹರಿಸಬೇಕಾಗಿದೆ.

*







## ಕೂಡಿ ಬಾಳಿದರೆ ಸಗ್ಗಸುಖ

- ರಾಜೇಂದ್ರಶಿಶು
೨೪೨, ಉತ್ತರಾದಿಮಠದ ರಸ್ತೆ
ಮೈಸೂರು

ಆದಿಮಾನವ ಒಂಟಿಯಾಗಿ ಬದುಕುತಿದ್ದಾಗ ತನ್ನ ಸಮಸ್ಯೆಯ ಪರಿಹಾರಕ್ಕೆ ಮಾರ್ಗ ಬಯಸಿದಾಗ ಸಾಂಘಿಕ ಜೀವನ ಬಯಸಿದ. ಸಾಂಘಿಕ ಜೀವನ ಎಂದರೆ ಕೂಡಿ ಬಾಳುವುದು. ಒಟ್ಟಾಗಿ ಒಂದೆಡೆ ಸೇರಿ, ತಮ್ಮ ತಮ್ಮ ನೋವನ್ನು ಹಂಚಿ ಸುಖದಲ್ಲಿ ಹರ್ಷಿಸಿ, ಬಿದ್ದವರನ್ನು ಮೇಲೆತ್ತಿ ರಕ್ಷಿಸಿ ಸಗ್ಗ ಸುಖ ಕಾಣುತ್ತಿದ್ದ. ನಾಗರೀಕತೆ ಬೆಳೆದಂತೆ ಸಹಜೀವನ ನಶಿಸುತ್ತ ಇಂದು ಮತ್ತೆ ಒಂಟಿತನದ ಸ್ವಾರ್ಥ ಬದುಕನ್ನೆ ಆಶಿಸುತ್ತಿದ್ದಾನೆ. ಇಂಥ ಜೀವನದಲ್ಲಿ ನೆಮ್ಮದಿ ಸುಖ ಶಾಂತಿ ಕಾಣುತ್ತಿದ್ದಾನೆಯೇ? ''ಕೂಡಿ ಬಾಳಿದರೆ ಸಗ್ಗ ಸುಖ'' ಎಂಬ ಮಾತು ಮೌಲ್ಯವನ್ನು ಕಳೆದುಕೊಳ್ಳುತ್ತಿದೆ.

ನಮ್ಮ ಸುತ್ತಲಿನ ಪರಿಸರ ನೋಡಿ, ಪ್ರಾಣಿ ಪಕ್ಷಿಗಳ ಜಗತ್ತನ್ನು ನೋಡಿ, ಕ್ರಿಮಿಕೀಟಗಳನ್ನು ನೋಡಿ, ದಿನನಿತ್ಯ ಪತ್ರಿಕೆಗಳಲ್ಲಿ ಕಾಣುತ್ತೇವೆ. ಪರಸ್ಪರ ದ್ವೇಷಿಸುವ ಪ್ರಾಣಿಗಳು ವೈಮನಸ್ಯ ಮರೆತು ಒಂದಾಗಿ ಬದುಕುತ್ತಿವೆ. ನಾಯಿಯ ಮೇಲೆ ಸವಾರಿ ಮಾಡುತ್ತಿರುವ ಮರ್ಕಟ, ನಾಯಿ ಬೆಕ್ಕುಗಳು ಚಲ್ಲಾಟವಾಡುತ್ತಿದೆ. ಇದು ಸಾಂಘಿಕ ಬದುಕು. ಆದರೆ ಪ್ರಾಣಿಗಳಿಗಿಂತ ನಾಗರೀಕನಾದ ಬುದ್ಧಿಜೀವಿಯಾದ ಮಾನವನಲ್ಲಿ ಈ ಒಗ್ಗೂಡುವಿಕೆ ಏಕಿಲ್ಲ ?

ಸಹ ಜೀವನದ ಬದುಕು ಆನಂದಮಯ. ನಮ್ಮ ದೇಹ ನೋಡಿ ಅಲ್ಲಿನ ಅಂಗಾಂಗಗಳು ಹೊಂದಿಕೊಂಡು ಬಾಳ್ವೆ ನಡೆಸುತ್ತಿರುವುದರಿಂದ ಈ ಬಂಡಿ ಸಮಸ್ಥಿತಿಯಲ್ಲಿ ನಡೆಯುತ್ತಿದೆ. ಒಂದು ಅಂಗ ವ್ಯತ್ಯಸ್ತವಾದರೆ ದೇಹ ಊನವಾಗುತ್ತದೆ. ದೇಹವೆಂಬುದೊಂದು ಬಂಡಿ ಅದನ್ನು ಹೊಡೆಯುವರು ಐವರು ಮಾನಸರಾದ ಪಂಚೇಂದ್ರಿಯಗಳು ಇವರಲ್ಲಿ ಒಬ್ಬರೊಬ್ಬರಿಗೆ ಸಮವಿಲ್ಲ. ಕಣ್ಣು ಏನನ್ನೊ ನೋಡ ತಿಳಿಸುತ್ತದೆ, ಕಿವಿ ಏನನ್ನೊ ಕೇಳಬೇಕೆನ್ನುತ್ತದೆ. ಹೀಗೆ ಓನೇ ಇಂದ್ರಿಯ ಮನಸ್ಸನಂತು ಹಿಡಿದಿಡಲಾಗದು. 'ಮನವೆಂಬ ಮರ್ಕಟನ ಬಾಧೆ ತಾಳಲಾರೆನುದೇವ' ಎನ್ನುತ್ತಾರೆ ಶರಣರು ನಮ್ಮನ್ನೇ ನಾವು ಹಿಡಿತದಲ್ಲಿಡದ ನಾವು ಸಹಜೀವನ ಹೇಗೆ ನಡೆಸುತ್ತೇವೆ ಹೇಳಿ. ನಮ್ಮ ದೇಹದಲ್ಲಿ ಇರುವ ಅಂಗಗಳು ಮಾತನ್ನು ಕೇಳವು. ಆ ಕಾರಣವೇ ಶರಣರು ಹೇಳಿದ್ದು.

*ತನುವೊಳಗೆ ಹುಸಿ ತುಂಬಿ ಮನದೊಳಗೆ*
*ವಿಷಯತುಂಬಿರುವ ನಮ್ಮಲ್ಲಿ ಮನೆಯೊಡೆಯನಿಲ್ಲ ದಿಂದಿರುವುದು*

ವ್ಯಕ್ತಿಗತ ಬದುಕಿನಲ್ಲಿ ಇಂತಾದರೆ ಕುಟುಂಬದಲ್ಲಿನ ಸಹಬಾಳ್ವೆ ನೋಡಿ, ಇಂದು ಸತಿ-ಪತ್ನಿ, ತಂದೆ-ಮಕ್ಕಳು, ಬಂಧು-ಬಾಂಧವರಲ್ಲಿ ಹೊಂದಾಣಿಕೆ ಇದೆಯ. ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಿದ್ದೇವೆಯೇ ? ಹಿಂದೆ ಇದ್ದ ಅವಿಭಕ್ತ ಕುಟುಂಬದಲ್ಲಿ ಎಂಥ ಸಹಕಾರ ಜೀವನ - ಒಬ್ಬನಿಗೆ ಎಡರಾದಲ್ಲಿ ಇನ್ನೊಬ್ಬನ ಸಹಕರಿ - ತೃಪ್ತಿ ಬದಕು ನೆಮ್ಮದಿ ನೆಲಸಿತ್ತು. ಇಂದು ವಿಭಕ್ತ ಕುಟುಂಬದಲ್ಲಿ ಮಕ್ಕಳು ತಾಯಿ ತಂದೆಯನ್ನು ಸರಿಯಾಗಿ ನೋಡುವುದು ಭಾನುವಾರ ಮಾತ್ರ, ಅದರಿಂದ ಭಾನುವಾರ ಅಪ್ಪ ಅಮ್ಮನವಾರವೆನ್ನುತ್ತಾರೆ. ಅಂದೂ ಮಕ್ಕಳು ಎಲ್ಲರೂ ಸೇರಿ ಸಂತಸದಿಂದಿರುತ್ತಾರೆಯೆ ? ಏನಿಲ್ಲ ಹೋಟಲಿನಲ್ಲಿ ಊಟ ಎಲ್ಲೊ ಹೋಗಿ ಕಾಲಕಳೆದು ಬಂದರಾಯಿತು. ತಾಯಿಯ ಕೈ ತುತ್ತೆಲ್ಲಿ ? ವಾತ್ಸಲ್ಯವೆಲ್ಲಿ ? ಸಿದ್ದರಾಮ ಒಂದೆಡೆ

*ಸಂಸಾರವೆಂಬರಾಹುವಿನ ಅನಲೊಳಗೆ*
*ಇಪ್ಪೆನಯ್ಯಾ ? ಆವಾಗ ನುಂಗಿಸಿಕೊಂಡೆನೊ*
*ಆವಾಗ ಉಗುಳಿಸಿಕೊಂಬೆ ಎಂದರಿಯೆನಯ್ಯ*

ಈ ಸಾಂಸಾರಿಕ ಜೀವನದಲ್ಲಿ ಮುಳುಗಿ ತೊಳಲಾಡುತ್ತ ಬದುಕುದಲ್ಲಿ ಎಲ್ಲಿದೆ ಸೌಹಾರ್ದತೆ. ಮಕ್ಕಳನ್ನು ಸಾಕಿ ಬೆಳಸಿ ವಿದ್ಯಾವಂತರಾಗಿಸಿ ಆ ಮಕ್ಕಳು ವಿದೇಶಕ್ಕೆ ಹೋಗಿ ನೆಲೆಗೊಂಡು ಮಕ್ಕಳು ವಿದೇಶಿಗಳು ತಂದೆ ತಾಯಿಗಳು ದಿಕ್ಕು ತಪ್ಪಿದವರಾಗುತ್ತಿದ್ದಾರೆ.

ಸ್ವದೇಶದಲ್ಲಿರುವ ಜೊತೆಯಲ್ಲಿರುವ ಮಕ್ಕಳು ಎಷ್ಟರ ಮಟ್ಟಿಗೆ ಆಶ್ರಯಿಸಿದ ಹೆತ್ತವರನ್ನು ನೋಡಿಕೊಳ್ಳುತ್ತಾರೆ ನೋಡಿ. ಹೆತ್ತವರನ್ನೆ ಹೊರೆ ಎಂದು ಹೊರಗೆ ಹಾಕಿದ ಮಕ್ಕಳಿದ್ದಾರೆ, ಮಕ್ಕಳನ್ನೆ ಕೊಲ್ಲುವ ಹೆತ್ತವರಿದ್ದಾರೆ. ಪತಿಯನ್ನು ಕೊಲ್ಲುವ ಪತ್ನಿಯರು, ಪತ್ನಿಯನ್ನು ಕೊಲ್ಲುವ ಪತಿಯರು ಇದ್ದಾರೆ. ನಿತ್ಯಪತ್ರಿಕೆಯಲ್ಲಿ ನೋಡುತ್ತಲೇ ಇದ್ದಾವೆ. 'ಅಮೃತದೊಳು ವಿಷ ಬೆರಸಿದ ಸಂಸಾರ ಇವರದು' ಎಂದಿದ್ದಾರೆ ಶರಣರು.

ಕೆಲದಿನಗಳ ಹಿಂದೆ ರೈಲ್ವೆ ನಿಲ್ದಾಣದಲ್ಲಿ ಒಬ್ಬ ವೃದ್ಧರು ಕುಳಿತಿದ್ದರು. ತಾವು ಎಲ್ಲಿಗೆ ಹೋಗಬೇಕು ಎಂಬುದಿರಲಿ ಮಗನ ಒಂದು ಹೆಸರು ಬಿಟ್ಟರೆ ತಮ್ಮ ಮನೆ ವಿಳಾಸ ತಿಳಿಯದು, ಯಾರನ್ನು ಗುರುತಿಸದ ಈ ವೃದ್ಧರ ಜೇಬಿನಲ್ಲಿ ೧ ಟಿಕೆಟ್ ೧೦೦ ರೂ ಇತ್ತು. ಯಾರು ಕೇಳಿದರು ನನ್ನ ಮಗ ಇಲ್ಲೇ ಇರಿ ಬರುತ್ತೇನೆ ಎಂದು ಹೇಳಿದ್ದಾನೆ. ಅಷ್ಟೇ ಉತ್ತರ. ನಿನ್ನೆಯಿಂದಲೂ ಹೀಗೆ ಕುಳಿತಿದ್ದಾರೆ ಮಗ ಬರುತ್ತಾನೆ ಎನ್ನುತ್ತಾರೆ ಎಂದು ಕೆಲವರು ಹೇಳಿದರು. ಮಗ ಎಲ್ಲಿ ಹೋದ ? ತಂದೆಯನ್ನು ನೋಡಿಕೊಳ್ಳುವ ಹೊರೆ ತಪ್ಪಿಸಿಕೊಳ್ಳಲು ಈ ರೀತಿ ಮಾಡಿರಬೇಕು ಎಂದು ಕೆಲವರ ಮಾತು. ಏನೇ ಇರಲಿ ಹೆತ್ತವರೆ ಹೊರ ಎಂದರೆ ಅವರು ಗಳಿಸಿದ ಆಸ್ತಿ ಏಕೆಬೇಕು. ಆಸ್ತಿಬೇಕು ಆಸರೆ ನೀಡಿದವರಿಗೇನೆನ್ನಬೇಕು ಹೇಳಿ, ಇಂಥ ಸ್ಥಿತಿಯಲ್ಲಿ ತಂದೆ ಮಕ್ಕಳಲ್ಲಿ ಎಲ್ಲಿದೆ ಹೊಂದಾಣಿಕೆ.

ಮಾತೆತ್ತಿದರೆ ವಿಚ್ಛೇದನ ಹೆಸರೆತ್ತುವ ದಂಪತಿಗಳಲ್ಲಿ ಎಲ್ಲಿದೆ ಬಾಂಧವ್ಯ ? ನನಗಾಗಿ ಮಡದಿ ಮಕ್ಕಳಿಗಾಗಿ ಎಂದು ಹೊರುವ ಜೀವಕ್ಕೂ ನೆಮ್ಮದಿ ಇಲ್ಲ, ಕುಟುಂಬದಲ್ಲಿ ನಿತ್ಯ ಕಲಹ, 'ಸಂಘಟನೆ ಎಲ್ಲಿದೆ ?'

ಸಮಾಜದಲ್ಲಂತೂ ಕೇಳುವಂತೆ ಇಲ್ಲ. ಅಕ್ಕಪಕ್ಕದವರ ಬಗ್ಗೆ ನಗರಗಳಲ್ಲಿ ತಿಳಿದಿರುವುದಿಲ್ಲ. ಬೇರೆಯವರೊಡನೆ ಬೆರೆಯದವರನ್ನು 'ಎಂಥ ಡಿಸಪ್ಲಿನ ಡೀಸೆಂಟ್ ಬದುಕು' - ಎನ್ನುತ್ತೇವೆ. ಗ್ರಾಮೀಣ ಪ್ರದೇಶದಲ್ಲಿ ಸಾಂಘಿಕ ಬದುಕಿನ್ನು ಉಳಿದಿದೆ. ಯಾರೊಡನೆ ಮಾತಾಡದ ನಾವೇಳುವ ಡಿಸೆಂಟ್ ಜನರನ್ನ ಅವರು 'ಎಂಥ ಬದುಕು ಅದೊಂದು ಬದುಕಾ ಇದ್ದಾಗ ನಾಲ್ಕು ಜನಕ್ಕೆ ಬೇಕು, ಸತ್ತಾಗ್ಲು ನಾಲ್ಕು ಜನಕ್ಕೆ ಬೇಕಾಗದವನ ಬದುಕು' ವ್ಯರ್ಥ ಎನ್ನುತ್ತಾರೆ.

ಶರಣ ಸಮುದಾಯ ನೋಡಿ. ಎಲ್ಲೋ ಹುಟ್ಟಿ ಎಲ್ಲೋ ಬೆಳೆದು ಯಾವುದೋ ಧರ್ಮ, ಭಿನ್ನ ಮನೋಭಾವ ಹೊಂದಿದವರು ಕಲ್ಯಾಣಕ್ಕೆ ಬಂದರು ಅನುಭವ ಮಂಟಪದಲ್ಲಿ ಸಂಘಟಿಸಿ ವಿಚಾರ ಮಥನಗೊಳಿಸಿ ಅನುಭಾವದ ನವನೀತವನ್ನು ಜಗಕ್ಕೆ ಕೊಟ್ಟರು ಎಂಥ ವಾತ್ಸಲ್ಯ... ಎಂಥ ಭವ್ಯ ಬದುಕು...... ಅಕಾಶಂ ಕೈಲಾಸ ಇಳಿಗಿಳಿದಿತ್ತು. 'ನುಡಿ-ನಡೆ - ನೆನೆದರೆ ರೋಮಾಂಚನ.

ಇಂದು ನಾವು ಬಂದವರನ್ನು ಒಳ್ಳೆಯ ನುಡಿಯಿಂದ ಮಾತನಾಡಿಸುವುದೇ ಕಷ್ಟವಾಗಿದೆ. ಈ.ಟಿ.ವಿಯ ಧಾರಾವಾಯಿಗಳ ಜಾಲದಲ್ಲಿ ಸಿಲುಕಿ ಸೌಹಾರ್ದತೆ ಮಾತಿಗೂ ಬರವಾಗುತ್ತಿದೆ. ಮನೆಗೆ ಬಂದವರನ್ನು ಟಿ.ವಿ.ಯಿಂದ ಕಣ್ಣು ತಿರುಗಿಸದೆ 'ಬನ್ನಿ' ಅಷ್ಟೇ ಹೇಳಿ ಕೂರಿಸುವ ನಮ್ಮನ್ನು ನೋಡಿ

*ಏನು ಬಂದಿರಿ ಹದುಳವಿದ್ದಿರೆ ಎಂದರೆ*
*ನಿಮ್ಮ ಮೈಸಿರಿ ಹಾರಿ ಹೋಹುದೆ ?*
*ಬಡನೆ ನುಡಿದರೆ ಸಿರಿಹೊಟ್ಟೆ ಹೊಡೆವುದೆ ?*
*ಕೊಡಲಿಲ್ಲದಿದ್ದಿರೊಂದು ನುಡಿಯಿಲ್ಲದಿದ್ದರೆ*
*ಕೆಡಹಿ ಮೂಗಕೊಯ್ಯದೆ ಮಾಣ್ಬನೆ*

ಅಣ್ಣನವರು ಅಂದರೆ ಝುಂಕಿಸಿದ್ದಾರೆ. ಆತ್ಮೀಯತೆಯ ಅಕ್ಕರೆಯ ನುಡಿಯಲ್ಲ ಮಾಯವಾಗಿದೆ.

ಅಂದು ಅಂಥ ಹೊಂದಾಣಿಕೆ ಇದ್ದುದರಿಂದಲೇ ಬಸವಣ್ಣ ಸಗ್ಗ ಇಳಿಗಿಳಿಸಿದ. ಇಂದೆಲ್ಲಿ ಕಾಣುತ್ತೇವೆ ಹೇಳಿ. ನಮ್ಮ ನಡೆ-ನುಡಿ ವೇದಿಕೆಗೆ ಸೀಮಿತಗೊಳಿಸುವ 'ನಾನೊಬ್ಬ ಬದುಕಿರೆ ಸಾಕು ಜಗವಳಲಿ ನನಗೇನು' ಎನ್ನುವ ಗುರಿಯಿಟ್ಟುಕೊಂಡ ನಮ್ಮ ಬದುಕು ಎಲ್ಲಿ ಬಂಧುರವಾಗುತ್ತದೆ.

ಪಶುಪಕ್ಷಿಗಳು ಹಂಚಿ ತಿನ್ನುತ್ತವೆ. ಅವುಗಳ ಸಹಕಾರ ನೋಡಿ.

*'ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವ*
*ಕೋಳಿಯೊಂದ ಕುಟುಕ ಕಂಡರೆ ಕರೆಯದೆ*
*ತನ್ನ ಕುಲವೆಲ್ಲವ?'*

ಆದರೆ ಮಾನವ ಎಲ್ಲವೂ ನನಗೆ ಬೇಕೆಂಬ ಅಭಿಲಾಶೆಯುಳ್ಳ ತಲೆಮಾರು ಸಂಗ್ರಹಿಸುವ ಭಾವವುಳ್ಳ ಈತನಿಗೆ ಪ್ರಾಣಿಗಳಿಗಿರುವಷ್ಟು ನೆಮ್ಮದಿ ಎಲ್ಲಿದೆ ಹೇಳಿ.

ಎಲ್ಲಿವರೆಗೆ ಶರಣರ ತತ್ತ್ವವನ್ನು ವೇದಿಕೆಗೆ ಸೀಮಿತಗೊಳಿಸಿ ಆಚರಣೆಗೆ ದೂರ ಮಾಡಿಕೊಳ್ಳುತ್ತೇವೋ ಅಲ್ಲಿವರೆಗೆ ನೆಮ್ಮದಿಯ ಬಾಳು ನಮಗೆ ದೊರಕದು. ನೆಮ್ಮದಿಯ ಜೀವನ ನಮಗೆ ಸಾಂಘಿಕ ಬದುಕಿನಿಂದ ದೊರಕುತ್ತದೆ. ಹಂಚಿ ಬಾಳುವಲ್ಲಿ ಸಗ್ಗವಿದೆಯಲ್ಲವೆ ?

*





# ಶಿವಶರಣೆಯರ ದೃಷ್ಟಿಯಲ್ಲಿ ವಿರಕ್ತರು

- ಎಸ್. ಸುಮಂಗಳಮ್ಮ,
ಉಪನ್ಯಾಸಕಿ, ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು
ತುಮಕೂರು.

ಶಿವಶರಣೆಯರು ಸ್ವತಂತ್ರ ಮನೋಭಾವವುಳ್ಳವರು. ಸಮಾನತೆಯ ಆಧಾರದ ಮೇಲೆ ಸಮಾಜವನ್ನು ಕಟ್ಟಿದರು. ತಮ್ಮ ಅಂತಸ್ತುಗಳನ್ನು ಮರೆತು ಸಾಮಾಜಿಕ, ಆರ್ಥಿಕ, ಆಧ್ಯಾತ್ಮಿಕ, ಅನುಭಾವಿಕ ಎಲ್ಲಾ ಹಂತಗಳಲ್ಲಿ ತಮ್ಮ ಚಿಂತನೆಗಳನ್ನು ಪರಸ್ಪರ ಹಂಚಿಕೊಂಡು ಬದುಕಿದ್ದಾರೆ. ಅಲ್ಲದೆ ಆಧ್ಯಾತ್ಮ, ಅನುಭಾವ, ಧರ್ಮ ತತ್ವಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿ ಕೊಂಡಿದ್ದಾರೆ. ಉತ್ತಮವಾದ ನಡೆ - ನುಡಿ ಆಚಾರ ವಿಚಾರಗಳಿಂದ ಈ ನೆಲದಲ್ಲಿಯೇ ಕೈಲಾಸವನ್ನು ಕಂಡಿದ್ದಾರೆ.

ವಿರಕ್ತರು ಎಂದರೆ ವರ್ಣಾಶ್ರಮ ಧರ್ಮಗಳಾದ ಬ್ರಹ್ಮಚರ್ಯೆ, ಗೃಹಸ್ಥಾಶ್ರಮವನ್ನು ಮುಗಿಸಿ, ವಾನಪ್ರಸ್ಥಕ್ಕೆ ಬಂದು, ಸನ್ಯಾಸವನ್ನು ಸ್ವೀಕರಿಸುವುದು - ಎಂದರ್ಥವಿದೆ. ಜಗತ್ತಿನ ಉದ್ಧಾರಕ್ಕೆ, ಮನುಕುಲದ ಶ್ರೇಯಸ್ಸಿಗೆ, ಧ್ಯಾನ, ತಪಗಳನ್ನು ಮಾಡುತ್ತಾ ಆದರ್ಶಪ್ರಾಯರಾಗಿ ಆಧ್ಯಾತ್ಮಿಕ ಜೀವನವನ್ನು ನಡೆಸುತ್ತಾರೆ. ಅಲ್ಲದೆ ಸಮಾಜದಲ್ಲಿಯೇ ಇದ್ದು ಅರಿಷಡ್ವರ್ಗಗಳನ್ನು ಗೆದ್ದು ಸಾಮಾಜೋಧಾರ್ಮಿಕ ಕಾರ್ಯಗಳನ್ನು ಮಾಡುತ್ತಾ ಶ್ರೀಗಂಧದಂತೆ ಸುವಾಸನೆಯನ್ನು ಬೀರುತ್ತಾ ಆಧ್ಯಾತ್ಮಿಕ ಜೀವನವನ್ನು ಸಾಗಿಸುವವರೂ, ವಿರಕ್ತರು ಎನ್ನಬಹುದು. ಐದು ಬೆರಳು ಹೇಗೆ ಅಸಮಾನತೆಯಿಂದ ಇರುವುವೋ ಹಾಗೆ ಎಲ್ಲಾ ವಿರಕ್ತರೂ ಈ ರೀತಿ ಇರುವುದಿಲ್ಲ, ಉದರಪೋಷಣೆಗಾಗಿ, ಅರಿಷಡ್ವರ್ಗಗಳ ದಾಸರಾಗಿ, ತಮಗೂ ಸಮಾಜಕ್ಕೂ ಮೋಸಮಾಡುವ ಆಷಾಡಭೂತಿ ಗಳಾಗಿ ಬದುಕಿರುವವರನ್ನು ಕಂಡರೆ ಶರಣೆಯರು ಕಿಡಿ ಕಾರಿದ್ದಾರೆ.

ವೀರ ವಿರಾಗಿಣಿಯಾದ ಅಕ್ಕ ತನ್ನ ವಚನದಲ್ಲಿ ಹೀಗೆ ಹೇಳಿದ್ದಾಳೆ :

*ವಿರಕ್ತಿ ವಿರಕ್ತಿ ಎಂಬುವರು*
*ವಿರಕ್ತಿ ಪರಿಯೆಂತುಂಟು ಹೇಳಿರಯ್ಯಾ ?*
*ಕಟ್ಟಿದ್ದ ಲಿಂಗವ ಕೈಯಲ್ಲಿ ಹಿಡಿದು*
*ಬೆತ್ತಲೆಯಿರ್ದಡೆ ವಿರಕ್ತನೇ ?*
*ಎಟ್ಟುವ ತೊರದ ಮತ್ತೆ*
*ಕಟ್ಟಿದ ಲಿಂಗವ ಕೈಯಲ್ಲಿ ಹಿಡಿಯಲೆಬೇಕು*
*ಇಟ್ಟಿದ ತೊರೆಯದೆ*
*ಕಟ್ಟಿದ ಲಿಂಗವ ಕೈಯಲ್ಲಿ ಹಿಡಿದ ಭ್ರಷ್ಟರ ನೇನೆಂಬೆ*
*ಚನ್ನಮಲ್ಲಿಕಾರ್ಜುನ*

ಲಿಂಗ ಅರಿವಿನ ಕುರುಹು ಅದರ ಮೂಲಕ ವಿಷಯ ಲಲಾಸೆಯನ್ನು ತೊರೆದು ವಿರಕ್ತನಾಗಬೇಕು. ಹುಟ್ಟಿನಿಂದಲೇ ಬಂದ ಕೆಲವು ಲಲಾಸೆಗಳನ್ನು ತೊರೆಯದೆ, ತನು ಬೆತ್ತಲೆ ಯಾದೊಡೇನು? ಮನ ಬೆತ್ತಲೆಯಾಗದೆನ್ನಕ್ಕ? ತೋರಿಕೆಗೆ ಕೈಯ್ಯಲ್ಲಿ ಲಿಂಗವನ್ನು ಹಿಡಿದರೆ ಅವನು ವಿರಕ್ತನಲ್ಲ ಮನಸ್ಸನ್ನು ಗೆಲ್ಲಬೇಕು. ತನ್ನರಿವು ಸಮಾಜಕ್ಕೆ ಪೂರಕವಾಗಿರಬೇಕು ಹೊರತು ಮಾರಕವಾಗಬಾರದು.

*ವಿರಕ್ತಿ ವಿರಕ್ತಿ ಎಂಬರು ವಿರಕ್ತಿಯ ಪರಿ ಎಂತುಂಟು ಹೇಳಯ್ಯಾ*
*ಕಟ್ಟಿದ ಲಿಂಗವ ಕೈಯಲ್ಲಿ ಹಿಡಿದಿದ್ದರೆ ವಿರಕ್ತನೇ ?*
*ಹುಟ್ಟು ಕೆತ್ತುವ ಡೊಂಬನಂತೆ*
*ಬಿಟ್ಟ ಮಂಡೆಯ ಕೇಶವ ನುಣ್ಣಿಸಿ ಬಣ್ಣಿಸಿ*
*ಎಣ್ಣೆಯ ಗಂಡ ಹಾಕಿದಡೆ ವಿರಕ್ತನೇ ?*
*ಕಟ್ಟುಹರಿದ ಪಂಜಿನಂತೆ*
*ಬಿಟ್ಟ ಮಂಡೆಯ ಕಟ್ಟದಿರ್ದಡೆ ವಿರಕ್ತನೇ ?*
*ಹರದನಂತೆ ಹೇಸಿಯಾಗಿರ್ದಡೆ ವಿರಕ್ತನೇ ?*
*ಮೂಗನಂತೆ ಮಾತನಾಡದಿರ್ದಡೆ ವಿರಕ್ತನೇ ?*
*ಹೊನ್ನು ಹೆಣ್ಣು ಮಣ್ಣು ಬಿಟ್ಟು*
*ಅಡವಿಯಾರಣ್ಯದಲಿರ್ದೊಡೆ ವಿರಕ್ತನೇ ? ಅಲ್ಲ*
*ವಿರಕ್ತನ ಪರಿಯೆಂತೆಂದೊಡೆ*
*ಒಡಲ ಹುಡಿಗುಟ್ಟಿ ಮೃಡನೊಳೆಡದೆರಹಿಲ್ಲದಿರಬಲ್ಲಡೆ ವಿರಕ್ತನಪ್ಪನು*

*ಅಲ್ಲದಿರ್ದಡೆ ಮೈಲಾರಿ ಮಲ್ಲಿಗೊರವಿಯಲ್ಲವೆ*
*ಚೆನ್ನಮಲ್ಲಿಕಾರ್ಜುನ*

ಇಲ್ಲಿ ವಿರಕ್ತಿಯ ಪರಿಯನ್ನು ಕುರಿತ ವಿವೇಚನೆಯಿದೆ. ಕೂದಲನ್ನು ನುಣ್ಣಗೆ ಬೋಳಿಸಿ ಮತ್ತೆ ಎಣ್ಣೆ ಹಾಕಿದಾಗ ಕೂದಲು ಚಿಗುರು ಮುಖದ ಸೌಂದರ್ಯ ವರ್ಧಿಸುವಂತೆ ಬಾಹ್ಯದಲ್ಲಿ ಸನ್ಯಾಸಿಯ ವೇಷ ಮನದಲ್ಲಿ ವಿಷಯ ಲಾಲಸೆ ತುಂಬಿರುವುದನ್ನು ಬೇರುಸಹಿತ ಕಿತ್ತುಹಾಕುವ ಸಂಕಲ್ಪಮಾಡಬೇಕು. ಮೋಸ ಮಾಡುವ ಹರದನಂತೆ ಕಾಲ ಕಳೆಯಬೇಕಾಗುತ್ತದೆ.

ದೇದ ದಂಡಿಸಿ, ಮೌನದಲ್ಲಿದ್ದು, ಅರಣ್ಯ ವಾಸ ಮಾಡಿದರೆ ವಿರಕ್ತನಲ್ಲ. ಆಕ್ಕನ ಮಾತಿನಲ್ಲೇ ಹೇಳುವುದಾದರೆ ಒಡಲ ಹುಡಿಗಟ್ಟಿ ಮೃಡನೊಳಿಡದೆರಹಿಲ್ಲದಿರಬಲ್ಲಡೆ ವಿರಕ್ತನಪ್ಪನು. ಅಂದರೆ ದೇಹಭಾವವಳಿದು - ಶಿವಭಾವ ತಳೆಯಬೇಕು ಶಿವನಲ್ಲಿ ಐಕ್ಯಳಾಗಬೇಕು ದೇವರು ಭಕ್ತ ಎಂಬ ಭೇದ ಅಳಿದು ಬಂದಾಗ ಮಾತ್ರ ವಿರಕ್ತ ಎನಿಸುತ್ತಾನೆ. ಮೋಹದ ಜಾಲದ ಬಲೆಯಿಂದ ಹೊರ ಬಂದಾಗ ಮಾತ್ರ ವಿರಕ್ತನು ಎನಿಸಲು ಸಾಧ್ಯ.

*ವಿರಕ್ತಿಯೇ ಆವಿರಕ್ತ ವಿರಕ್ತನೆನ್ನದಿರಣ್ಣ*
*ನೋಟದ ಕರುಳ ಕೊಯ್ದದನ್ನಕ್ಕರ*
*ಕ್ರೀಯದ ಕರಬೋನಗಳೊಡೆಯದನ್ನಕ್ಕರ*
*ಅಷ್ಟಮದಾದಿಗಳೆಂಬುವ ಹೊಟ್ಟು ಹರಿಯದನ್ನಕ್ಕರ*
*ಬೇಕು ಬೇದಾಯೆಂದು ಪರಿವ*
*ಸರ್ವ ಸಂ ದೇಹದ ಹೋಳೆದನ್ನಕ್ಕರ ವಿರಕ್ತ ವಿರಕ್ತನೆನ್ನದಿರಣ್ಣಾ*
*ಶ್ರೀ ಶೈಲ ಚೆನ್ನಮಲ್ಲಿಕಾರ್ಜುನ ದೇವನೊಬ್ಬನೆ ವಿರಕ್ತ ಕಾಣರಣ್ಣ*

ಇಲ್ಲಿ ಮನಸ್ಸಿನ ತಳಮಳವನ್ನು ಧ್ವನಿ ಪೂರ್ಣವಾಗಿ ವ್ಯಕ್ತಪಡಿಸುತ್ತದೆ. ನೋಟದಲ್ಲಿ ಸಾತ್ವಿಕತೆಯಿರಬೇಕು ತಾಮಸನೋಟ ಇದ್ದರೆ ಅದನ್ನು ಕೊಯ್ದು ಬಿಸಾಡಬೇಕು. ಕೆಲಸ ಮಾಡುವ ಕೈಗಳಲ್ಲಿ - ಶಿಸ್ತು ಬದ್ಧತೆ, ನೈತಿಕತೆಯಿರಬೇಕು - ಆಸಂಬದ್ಧತೆ ಇರಬಾರದು.

ಅಷ್ಟಮದಗಳಾದ ಧನ, ಕುಲ, ವಿದ್ಯಾ, ರೂಪ, ಯೌವ್ವನ, ಬಲ, ಪರಿವಾರ, ಅಧಿಕಾರ ಇಲ್ಲದಂತೆ ಹುಟ್ಟು ನಾಶಮಾಡಬೇಕು. ಇವುಗಳಲ್ಲಿ ಬೇಕು ಬೇಡ ಎಂಬ ಸಂದೇಹ ಕಳೆದು ದಿಟ್ಟತನದಿಂದ ನಡೆದಾಗ ತಾನು ಶರಣನಾಗಲು ಸಾಧ್ಯ. ಇವುಗಳೆಲ್ಲವನ್ನು ಗೆದ್ದಿರುವ ಚೆನ್ನಮಲ್ಲಿಕಾರ್ಜುನನೊಬ್ಬನೇ ವಿರಕ್ತ ಎಂದಿದ್ದಾಳೆ.

ವಿರಕ್ತನ ಬಗ್ಗೆ ಅಕ್ಕನು ಸೌಮ್ಯ ಭಾವನೆ ವ್ಯಕ್ತಪಡಿಸಿದರೆ, ಅಮುಗೆ ರಾಯಮ್ಮ ನಿಷ್ಠುರವಾದಿ. ತನು, ಮನ, ಭಾವಗಳನ್ನು ಶುದ್ಧಗೊಳಿಸಬೇಕೆಂದು ಹೇಳುತ್ತಾಳೆ. ಛಲವಾದಿಯಾದ ಈ ಶರಣೆ ತಾವು ಜ್ಞಾನಿಗಳೆಂದು ತಿರುಗುವ ವೇಷಧಾರಿ ವಿರಕ್ತರನ್ನು ತನ್ನ ವಚನಗಳಲ್ಲಿ ಟೀಕಿಸಿದ್ದಾಳೆ. ಆಕೆ ಬಳಸುವ ಮಾತುಗಳು ಚಾಟಿ ಏಟಿನಂತೆ ಚುರುಕು ಮುಟ್ಟಿಸುತ್ತದೆ.

*ವಿರಕ್ತ ವಿರಕ್ತ ಎಂಬ ಹಾದಿಕಾರರ ವಿರಕ್ತರೆನ್ನಬಹುದೇ ?*
*ಕಾವಿಯ ಹೊದ್ದು ತಿರುಗುವ ಜೀವಗಳ್ಳರು ವಿರಕ್ತರೇ ?*
*ನಾಮವ ಹೊತ್ತುಕೊಂಡು ತಿರುಗುವ ಗಾಮರ ವಿರಕ್ತರೆಂದರೆ*
*ಅಘೋರನರಕ ತಪ್ಪದು ಅಮುಗೇಶ್ವರ ಲಿಂಗವೆ*

ನೇರವಾದ, ಕಟುವಾದ ಮಾತುಗಳಿಂದ ವಿರಕ್ತರನ್ನು ಜೀವಗಳ್ಳ ಗಾವಿಲ ಎಂದು ಕರೆದು ಅವರಿಗೆ ಘೋರ ನರಕ ತಪ್ಪದು ಎಂದಿದ್ದಾಳೆ.

*ದೇಶ ದೇಶವ ತಿರುಗಿ ಮಾತುಗಳ ಕಲಿತು*
*ಗ್ರಾಸಕ್ಕೆ ತಿರುಗುವ ದಾಸಿವೇಸಿಯ ಮಕ್ಕಳ ವಿರಕ್ತರೆಂಬನೇ ?*
*ತನುವಿನಪ್ಪ ತಾಮಸವ ಕಳೆಯದೆ*
*ಕಾಬವರ ಕಂಡು ವಿರಕ್ತರೆಂದಡೆ*
*ಕುಂಬೀಪಾತಕ ನಾಯಕನ ನರಕ ತಪ್ಪದು ಅಮುಗೇಶ್ವರಾ*

ದೇಶ ತಿರುಗುವವನು, ದಾಸಿವೇಸಿಯ ಮಕ್ಕಳು ದೇಹದ ತಾಮಸ ಬುದ್ಧಿ - ಕಳೆಯ ಇರುವವರು ವೇಷಹಾಕಿಕೊಂಡು ತಿರುಗಿದರೆ ಆವರಿಗೆ ನರಕ ಅಮುಗೆರಾಯಮ್ಮ ವಿರಕ್ತನು ಹೀಗೆ ಇರಬೇಕು ಖಡಾ ಖಂಡಿತವಾಗಿ ಹೇಳುತ್ತಾಳೆ.

*ವಿರಕ್ತನಾದಬಳಿಕ ವಿಷಯಕ್ಕೆ ದೂರನಾಗಿರಬೇಕು*
*ಒಣಗಿದಮರನ ವಾಯು ಅಪ್ಪಿದಂತಿರಬೇಕು*
*ಸಮುದ್ರದೊಳಗೆ ತರುಗಿರಿಗಳು ಮುಳುಗಿದಂತಿರಬೇಕು*
*ಮೂಗಕಂಡ ಕನಸಿನಂತೆ ಇರಬೇಕು*
*ಜಾಲಗಾರ ಕಂಡ ರತ್ನದಂತಿರಬೇಕು*

ಹೀಗೆ ಅಮುಗೆರಾಯಮ್ಮನ ವಚನಗಳಲ್ಲಿ ದಟ್ಟವಾದ ಸಾಮಾಜಿಕಪ್ರಜ್ಞೆ, ಮಾತಿನಲ್ಲಿ ಒರಟುತನ, ಗಡಸುಗಾರಿಕೆಯಿಂದ ಕೂಡಿದ ದೇಸಿಯ ಸೊಗಡು ಬಂಡಾಯದ ಧೋರಣೆಯನ್ನು ಕಾಣಬಹುದು.

*





# ದೇವರು ಎಂದರೆ ಯಾರು !

– ಶ್ರೀಮತಿ ಶಾರದಾ ಗೋಪಾಲ್
ವೀರಭದ್ರೇಶ್ವರ ನಿಲಯ,
ಗಾಂಧಿ ನಗರ ಮುಖ್ಯರಸ್ತೆ, ಶಿವಮೊಗ್ಗ.
ದೂರವಾಣಿ : 76572

'ಪ್ರಾಣಿನಾಂ ಸರ್ವ ಭೂತಾನಾಂ ಹೃದ್ದೇಶೇರ್ಜುನ ತಿಷ್ಠತಿ'- ಎಲ್ಲಾ ಪ್ರಾಣಿಗಳ ಹೃದಯದಲ್ಲೂ ಕೂಡ ನಾನು ಸ್ಥಿತನಾಗಿದ್ದೇನೆ. ಎಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ತಿಳಿಸಿದ್ದಾನೆ. ಚೈತನ್ಯ ರೂಪಿ ಭಗವಂತನು ಇಲ್ಲದ ಸ್ಥಳವುಂಟೆ ? ಸಾಧ್ಯವಿಲ್ಲ.... ವ್ಯಾಪ್ತಂ ಏನ ಚರಾಚರಂ... ಎಂಬಂತೆ ಎಲ್ಲೆಲ್ಲಿಯೂ, ಎಲ್ಲರಲ್ಲಿಯೂ ಆ ಪರಮಾತ್ಮನು ವ್ಯಾಪಿಸಿದ್ದಾನೆ. ದೇವರು ಇದ್ದಾನೆಯೇ ಅಂತ ಕೇಳಿದರೆ ಪ್ರಾಜ್ಞರು ಹೇಳುವ ಮಾತು ಇದು. 'ನೀನು ನಂಬಿದರೆ ಆ ದೇವರು ಖಂಡಿತಾ ಸಿಗುತ್ತಾನೆ. ಒಂದು ವೇಳೆ ನೀನು ನಂಬದಿದ್ದರೆ, ಆ ದೇವರು ಇದ್ದರೂ ನಿನ್ನ ಪಾಲಿಗೆ ಇಲ್ಲ ಅಷ್ಟೆ! ಪರಮಹಂಸರು, ವಿವೇಕಾನಂದರು, ಬಸವಣ್ಣನವರು ಮುಂತಾದ ಮಹಾತ್ಮರು ಈ ಕಲಿಯುಗದಲ್ಲೂ ಸಹ ಆ ಪರಮಾತ್ಮನನ್ನು ಪ್ರತ್ಯಕ್ಷ ಕಂಡರು. ದೇವರ ಅಸ್ಥಿತ್ವವನ್ನು ಮತ್ತು ಹಿರಿಮೆಯನ್ನು ಜಗತ್ತಿಗೇ ಸಾರಿದರು. ದೇವರು ತನ್ನ ಮೆಚ್ಚಿನ ಭಕ್ತರನ್ನು ಪರೀಕ್ಷಿಸಲು ಹೆಚ್ಚು ಕಾಡುತ್ತಾನೆ, ಪರೀಕ್ಷಿಸುತ್ತಾನೆ. ಎಷ್ಟೋ ಸಂದರ್ಭಗಳಲ್ಲಿ ಭಕ್ತರು ಸಂಕಷ್ಟದಲ್ಲಿ ಸಿಲುಕಿದಾಗ ಅವರ ಕರೆಗೆ ಓಗೊಟ್ಟು ಪ್ರಕಟವಾಗಿ ಕಾಪಾಡಿದ್ದಾನೆ. ನೀರನ್ನು ಯಾವ ಪಾತ್ರೆಗೆ ಹಾಕುತ್ತೇವೆಯೋ ಅದೇ ರೂಪವನ್ನು ಪಡೆಯುತ್ತದೆ. ಅಂತೆಯೇ ಭಗವಂತನು ಭಕ್ತರು ಯಾವ ರೂಪದಲ್ಲಿ ಉಪಾಸಿಸುತ್ತಾರೆಯೋ ಅದೇ ರೂಪದಲ್ಲಿ ಪ್ರಕಟವಾಗುತ್ತಾನೆ.

ಭಕ್ತ ಕುಂಬಾರನು ತನ್ನ ಆರಾಧ್ಯ ದೈವವಾದ ವಿಠ್ಠಲನ ಮುಂದೆ ತನ್ನ ಎರಡೂ ಕೈಗಳನ್ನು ಕತ್ತರಿಸಿಕೊಳ್ಳುತ್ತಾನೆ. ತನ್ನ ಭಕ್ತನ ಅವಸ್ಥೆಯನ್ನು ನೋಡಲಾರದೆ, ತನ್ನ ಭಕ್ತನ ಅವಸ್ಥೆಯನ್ನು ನೋಡಲಾರದೆ, ತನ್ನ ಭಕ್ತನ ನಿಶ್ಚಲ ಭಕ್ತಿಗೆ ಒಲಿದು ತಾನೇ ದಾಸನಂತೆ ಬಂದು ಭಕ್ತಕುಂಬಾರನ ಸೇವೆಯನ್ನು ಮಾಡುತ್ತಾನೆ.

ದ್ರೌಪದಿಯ ವಸ್ತ್ರಾಪಹರಣ ಸಂದರ್ಭದಲ್ಲಿ ಶ್ರೀ ಕೃಷ್ಣ ಪ್ರಕಟಗೊಂಡು ತಂಗಿಯ ಮಾನ ಕಾಪಾಡಿದನು. ಅವನೆಷ್ಟು ಕರುಣಾಮಯಿ.

ಅನೀತಿ, ಅರಾಜಕತೆಗಳೇ ತುಂಬಿರುವ ಈ ಕಲಿಯುಗದಲ್ಲಿಯೂ ಕೂಡ ರಾಮಕೃಷ್ಣ ಪರಮಹಂಸರು ತಮ್ಮ ಇಷ್ಟದೈವವಾದ ಕಾಳಿಕಾಮಾತೆಯನ್ನು ಪ್ರತ್ಯಕ್ಷ ಕಂಡರು.

ಪುರಂದರದಾಸರ ಹೆಂಡತಿಯು ಪತಿಯ ಉಪಟಳವನ್ನು ತಾಳಲಾರದೆ ಕುಡಿಯಲೆಂದು ಸಿದ್ಧಪಡಿಸಿದ್ದ ವಿಷದ ಬಟ್ಟಲಿನಲ್ಲಿ ವಜ್ರದ ಮೂಗುತಿಯನ್ನು ಕಂಡದ್ದು ಎಷ್ಟು ವಿಚಿತ್ರ. ತನ್ನ ನಿಜ ಭಕ್ತರನ್ನು ಪರಮಾತ್ಮ ಕಾಪಾಡುವುದರಲ್ಲಿ ಸಂಶಯವಿಲ್ಲ.

ಗೀತ ಗೋವಿಂದವನ್ನು ರಚಿಸುತ್ತಿದ್ದ ಜಯದೇವ ಕವಿಯು ತನ್ನ ಕಾವ್ಯ ರಚನೆಮಾಡುವಾಗ ಮಧ್ಯದಲ್ಲಿ ಮುಂದಕ್ಕೆ ಬರೆಯಲು ತೋಚದೆ ಕೈಬಿಟ್ಟು, ಪರಮಾತ್ಮನ ಮೇಲೆ ಭಾರಹಾಕಿ ಸ್ನಾನ ಮಾಡಲು ಗಂಗಾನದಿಗೆ ಹೋದರಂತೆ, ಅದೇ ಕ್ಷಣದಲ್ಲಿ ಜಯದೇವನ ವೇಷದಲ್ಲೇ ಮನೆಗೆ ಬಂದ ಆ ಪರಮಾತ್ಮನು ಕೆಲವು ಶ್ಲೋಕಗಳನ್ನು ಮುಂದುವರೆಸಿ ಬರೆದು ಮಲಗಿದ್ದನಂತೆ. ಅದನ್ನೆಲ್ಲಾ ಪ್ರತ್ಯಕ್ಷ ಕಂಡ ಹೆಂಡತಿಯು, ಸ್ವಲ್ಪ ಹೊತ್ತಿನಲ್ಲಿ ಮತ್ತೆ ಬಾಗಿಲಲ್ಲಿ ಬಂದ ತನ್ನ ಪತಿಯನ್ನು ಕಂಡು ದಿಗ್ಭ್ರಮೆಯಾಗಿ ಕೋಣೆಯಲ್ಲಿ ನೋಡಲು ಓಡಿದಳಂತೆ. ಆದರೆ ಅಲ್ಲಿ ಯಾರೂ ಇರಲಿಲ್ಲ. ಇದನ್ನು ಪತಿಗೆ ತಿಳಿಸಲು ಆತನು ಆಶ್ಚರ್ಯದಿಂದ ತನ್ನ ಬರವಣಿಗೆಯನ್ನು ತೆರೆದು ನೋಡಲು, ತನಗೆ ಅತೀ ಕ್ಲಿಷ್ಟವೆನಿದ್ದ ಕೆಲವು ಶ್ಲೋಕಗಳನ್ನು ಆ ಪರಮಾತ್ಮನೇ ಬಂದು ಬರೆದಿಟ್ಟಿದ್ದನಂತೆ. ನೋಡಿದಿರಾ ಆ ಪರಮಾತ್ಮ ಎಷ್ಟು ಸ್ನೇಹಮಯಿ.

ಮಹಾರಾಷ್ಟ್ರದ ಸಕ್ಕೂಬಾಯಿ, ರಾಜಾಸ್ಥಾನದ ಮೀರಬಾಯಿ ಇನ್ನೂ ಮುಂತಾದ ಎಲ್ಲಾ ಮಹಾತ್ಮರಿಗೂ ಆ ಪರಮಾತ್ಮ ವಿಭಿನ್ನರೂಪಗಳಲ್ಲಿ ಪ್ರಕಟವಾಗಿದ್ದಾನೆ. ತನ್ನ ಭಕ್ತರನ್ನು ಸಾಂತ್ವಾನಗೊಳಿಸಿದ್ದಾನೆ. ಭಗವಂತನು ರಾಮ, ಕೃಷ್ಣನ ರೂಪದಲ್ಲಿಯೂ, ಕ್ರೈಸ್ತನ ರೂಪದಲ್ಲಿಯೂ, ಮೊಹಮ್ಮದ್ ಪೈಗಂಬರನಾಗಿಯೂ, ತನ್ನೆಲ್ಲಾ ಭಕ್ತರನ್ನು ರಕ್ಷಿಸುತ್ತಿದ್ದಾನೆ. ರಾಮಕೃಷ್ಣ ಪರಮಹಂಸರು ಒಮ್ಮೆ ಮುಸಲ್ಮಾನ್ ಧರ್ಮವನ್ನು ಅನುಸರಿಸುತ್ತಾ ಅವರ ಸಂಪ್ರದಾಯ ರೀತಿಯಲ್ಲಿಯೇ ಉಪಾಸನೆ, ಜಪ-ತಪಗಳನ್ನು ಮಾಡುತ್ತಾ ಆ ಪರಮಾತ್ಮನನ್ನೇ ಪ್ರತ್ಯಕ್ಷ ಕಂಡರು. ಇದೇ ರೀತಿ ಕ್ರಿಶ್ಚಿಯನ್ ಧರ್ಮವನ್ನು ಅಳವಡಿಸಿಕೊಂಡು ಉಪಾಸಕರಾಗಿ ಸ್ವಲ್ಪ ಕಾಲದಲ್ಲಿಯೇ ಆ ಕ್ರಿಸ್ತ ಪರಮಾತ್ಮನನ್ನು ದರ್ಶಿಸಿದರು. ಹೀಗಿಯೇ ಮಾಡುತ್ತಾ ಕೊನೆಯಲ್ಲಿ ಪರಮಹಂಸರು ಹೇಳಿದರು ಎಲ್ಲರೂ ಭಜಿಸುತ್ತಿರುವುದೂ ಆ

ಪರಮಾತ್ಮನನ್ನೇ ! ಎಲ್ಲಾ ಧರ್ಮಗಳ ಗುರಿಯೂ ಆ ಒಬ್ಬನೇ ಪರಮಾತ್ಮ! ಎಂದು ಹೇಳಿದರು. ಆದ್ದರಿಂದ ಎಲ್ಲಾ ಧರ್ಮಗಳ, ಮತಗಳ, ಪಂಥಗಳ ಗುರಿಯೂ ಒಬ್ಬನೇ ಪರಮಾತ್ಮನಿಗಾಗಿ. ಆದರೆ ಮಾರ್ಗಗಳು ಬೇರೆ ಅಷ್ಟೇ ಎಂದು ತಿಳಿಸಿದರು.

ಇಡೀ ಬ್ರಹ್ಮಾಂಡವೇ 'ಓಂ' ಶಬ್ದದಿಂದ ಉದಿಸಿದೆಯಂತೆ. ಹೀಗೆಂದು ನಮ್ಮ ವೇದಗಳು, ಪುರಾಣಗಳು ಶೃತಪಡಿಸುತ್ತವೆ. ನಾವು ಪ್ರತ್ಯಕ್ಷ ಕಾಣುತ್ತಿರುವ ಈ ಅಸಂಖ್ಯಾತ ಗ್ರಹಗಳು, ಬ್ರಹ್ಮಾಂಡಗಳು, ಎಲ್ಲವೂ ಓಂ ಬಿಂದುವಿನಿಂದಲೇ ಉದಿಸಿವೆಯಂತೆ. ಪರಮಾತ್ಮನ ಸ್ವರೂಪವೇ ಓಂ ಎಂದು ತಿಳಿಯಬಹುದು. ಮತ್ತೆ ಕಲ್ಪದ ಅಂತ್ಯದಲ್ಲಿ (ಓಂ) ಪರಮಾತ್ಮನಲ್ಲಿಯೇ ಈ ಅನಂತ ವಿಶ್ವಗಳೂ ಸೇರಿಹೋಗುತ್ತವೆ, ಲೀನವಾಗುತ್ತವೆ. ಇದು ಪರಮಾತ್ಮನ ಲೀಲೆ. ಈ ಮಾತನ್ನು ಇಂದಿನ ವಿಜ್ಞಾನವೂ ಕೂಡ ಒಪ್ಪಿಕೊಳ್ಳುತ್ತದೆ. ಬಿಂದುವಿನಲ್ಲಿ ಸಿಂಧು ! ಸಮಸ್ತ ದೇವತೆಗಳೂ, ಸಮಸ್ತವೂ ಈ 'ಓಂ' ಕಾರದಲ್ಲಿಯೇ ಇರುವುದರಿಂದಲೇ ಇದನ್ನು ಬೀಜಾಕ್ಷರವೆನ್ನುತ್ತಾರೆ. 'ಓಂ'ಕಾರವನ್ನು ಪೂಜಿಸಿದರೆ ಸಾಕು ಎಲ್ಲಾ ದೇವರುಗಳನ್ನು ಪೂಜಿಸಿದಂತೆಯೇ ಆಗುತ್ತದೆ. ಆದ್ದರಿಂದಲೇ ಸ್ವಾಮಿ ವಿವೇಕಾನಂದರು ಎಲ್ಲಾ ಜಾತಿ-ಮತ-ಪಂಥಗಳ ಜನರು ದೇವಸ್ಥಾನಗಳಲ್ಲಿ ಓಂ ಕಾರವನ್ನು ಪೂಜಿಸಬೇಕು, ಆರಾಧಿಸಬೇಕು ಎಂದು ಹೇಳಿದ್ದಾರೆ. ಇದರಿಂದ ನಾವೆಲ್ಲಾ ಒಂದೇ ಎಂಬ ಭಾವನೆ ಬೆಳೆಯುತ್ತದೆ. ಪರಸ್ಪರ ಪ್ರೀತಿ-ಸೌಹಾರ್ದಗಳು ಬೆಳೆದು ಶಾಂತಿಯು ನೆಲೆಸುತ್ತದೆ ಎಂದು ಹೇಳಿದ್ದಾರೆ. ಕನ್ಯಾಕುಮಾರಿಯಲ್ಲಿರುವ ವಿವೇಕಾನಂದರ ಸ್ಮಾರಕದಲ್ಲಿ ಓಂ ಕಾರವನ್ನೇ ಸ್ಥಾಪಿಸಿದ್ದಾರೆ. ★

## ಒಂದು ಪ್ರಕಟಣೆ

ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ (ರಿ)., ಶ್ರೀ ಸಿದ್ಧಗಂಗಾ ಮಠ, ತುಮಕೂರು - 4. ಇದರ ವತಿಯಿಂದ ಶ್ರೀಮಠದ ಆವರಣದಲ್ಲಿ ಶ್ರೀ ಸಿದ್ಧಗಂಗಾ ದೈಹಿಕ ಶಿಕ್ಷಣ ಮಹಾವಿದ್ಯಾಲಯ (ಡಿ.ಪಿ.ಇಡಿ.,) ಕಾಲೇಜನ್ನು ತೆರೆಯಲಾಗಿದೆ. ಪೂಜ್ಯ ಶ್ರೀ ಶ್ರೀಗಳವರು ದೈಹಿಕ ಶಿಕ್ಷಣಕ್ಕೂ ಹೆಚ್ಚಿನ ಪ್ರೋತ್ಸಾಹ ಕಲ್ಪಿಸಿಕೊಟ್ಟಿದ್ದಾರೆ. ಇದರ ಸೌಲಭ್ಯವನ್ನು ಪದವೀಧರ ವಿದ್ಯಾರ್ಥಿಗಳು ಉಪಯೋಗಿಸಿಕೊಂಡು ಹೆಚ್ಚಿನ ಉದ್ಯೋಗಾವಕಾಶ ಹೊಂದಲು ಸಹಕಾರಿಯಾಗಿದೆ. ಈ ಕಾಲೇಜಿಗೆ ದಾಖಲಾಗಬಯಸುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯದ (ಹಾಸ್ಟೆಲ್) ಅವಕಾಶವಿರುತ್ತದೆ.

*ಹೆಚ್ಚಿನ ವಿವರಗಳಿಗಾಗಿ ಸಂಪರ್ಕಿಸುವ ದೂರವಾಣಿ ಸಂಖ್ಯೆಗಳು :*

2282211, 2282028.

(ಶ್ರೀ ಸಿದ್ಧಲಿಂಗ ಸ್ವಾಮಿಗಳು)
ಉಪಾಧ್ಯಕ್ಷರು

## ಶ್ರೀವಾಣಿ

ಒಂದು ಕಾಲಕ್ಕೆ ಮಠಮಾನ್ಯಗಳು ಶಿಕ್ಷಣ ಸಂಸ್ಥೆಗಳನ್ನು ನಡೆಸುವ ಅನಿವಾರ್ಯತೆ ಇತ್ತು. ಅಗತ್ಯವಾಗಿ ಸಾಕ್ಷರತೆಯ ಬೆಳಕನ್ನು ವ್ಯಾಪಕವಾಗಿ ಚೆಲ್ಲಬೇಕಾಗಿತ್ತು. ಆ ದಿಸೆಯಲ್ಲಿ ಪೂರ್ವ ಪ್ರಾಥಮಿಕ ಶಾಲೆಯಿಂದ ಮೊದಲುಗೊಂಡು ಸ್ನಾತಕೋತ್ತರ ಸಂಸ್ಥೆಗಳನ್ನೊಳಗೊಂಡಂತೆ, ತಾಂತ್ರಿಕ ಹಾಗೂ ವೈದ್ಯಕೀಯ ಸಂಸ್ಥೆಗಳನ್ನು ಸಂಸ್ಥಾಪಿಸಿ ಸಾರ್ವಜನಿಕ ಸೇವೆಯಲ್ಲಿ ಮುನ್ನಡೆದಿರುವುದು ಸುತ್ತ್ಯರ್ಹವಾಗಿದೆ. ಪರಿಣಾಮವಾಗಿ ಶಿಕ್ಷಣ ಕ್ಷೇತ್ರದಲ್ಲಿ ಮಹತ್ವದ ಸೇವೆಯನ್ನು ಸಲ್ಲಿಸುವುದರ ಮೂಲಕ ಸರ್ಕಾರದ ಜೊತೆಯಲ್ಲಿ ಕೈಗೂಡಿಸಿ 'ರಾಜ್ಯರಥ' ಸುಲಲಿತವಾಗಿ ನಡೆಸಲು ಸಹಕರಿಸಿದೆ. ಉಲ್ಲೇಖಿತ ಶಿಕ್ಷಣ ಸಂಸ್ಥೆಗಳ ಆಶ್ರಯದಲ್ಲಿದ್ದುಕೊಂಡು ವ್ಯಾಸಂಗ ಮಾಡಿದ ಸಹಸ್ರಾರು ಮಂದಿ ಪ್ರತಿಭಾವಂತರು ರಾಜ್ಯ ಹಾಗೂ ಕೇಂದ್ರದ ಆಡಳಿತದಲ್ಲಿ, ಸಾರ್ವಜನಿಕ ಸೇವಾ ಕ್ಷೇತ್ರದಲ್ಲಿ ಕಾರ್ಯಶೀಲರಾಗಿರುವುದಿಂದು ಸರ್ವವೇದ್ಯ. ಅಂದು ಇಂದು ಅಗತ್ಯವೆನಿಸಿತ್ತು. ಆದರೆ ಈಗ ಮಠ ಮಾನ್ಯಗಳು ಗಮನ ಹರಿಸಬೇಕಾದ ಮಹತ್ವದ ಅಗತ್ಯವೆಂದರೆ ಶಿಕ್ಷಿತ ಜನರನ್ನು ನೈತಿಕತೆಯತ್ತ ನಡೆಸುವ ಜವಾಬ್ದಾರಿಯನ್ನು ಹೊರಬೇಕಾಗಿದೆ. ನೀತಿ ನಿಯಮಗಳಿಗೆ ಅನಕ್ಷರಸ್ಥರು ಅಷ್ಟಿಷ್ಟು ಬೆಲೆಕೊಡುತ್ತಿದ್ದಾರೆ. ಆದರೆ ವಿಷಾದನೀಯವೆಂದರೆ "ಕಲಿತ"ವರೇ ಸ್ವಾರ್ಥ ಸಂಕುಚಿತರಾಗಿ ನೈತಿಕತೆಯ ದಿವಾಳಿಗೆ ಕಾರಣರಾಗಿದ್ದಾರೆ. ಈ ವರ್ಗದಲ್ಲಿ ಎಲ್ಲ ವೃತ್ತಿಯವರಿದ್ದಾರೆ. ಸಚಿವರು, ಶಾಸಕರು, ಅಧಿಕಾರಿಗಳು, ಶಿಕ್ಷಕರು, ವೈದ್ಯರು, ನ್ಯಾಯಾಧೀಶರು, ಕಾರ್ಮಿಕರು-ಸ್ತ್ರೀಯರು, ಪುರುಷರೆಂಬ ಭೇದ ಇಲ್ಲಿಲ್ಲ. ಹಡೆದ ತಾಯಿಗೆ ಆಶ್ರಯಕೊಡಲೂ ಹಿಂದೆ-ಮುಂದೆ ನೋಡವಂತಹ ವರಿದ್ದಾರೆಂದರೆ ನಮ್ಮ ಸಂಸ್ಕೃತಿ ಏನಾಗುತ್ತಿದೆ? ಎಂಬುದು ತಿಳಿದೀತು. ಧರ್ಮಾಧಿಕಾರಿಗಳು ಇತ್ತ ಗಮನಹರಿಸಬೇಕಾಗಿದೆ. ಆತ್ಮಶಿಕ್ಷಣದತ್ತ ದೃಷ್ಟಿಚೆಲ್ಲಬೇಕು. ಮತ್ತೆ ನೈತಿಕ ಜೀವನದ ಪುನರುತ್ಥಾನವಾಗುವಂತೆ ತಮ್ಮನ್ನು ಅರ್ಪಿಸಿಕೊಳ್ಳಬೇಕಾಗಿದೆ. ಸಾಕ್ಷರತೆಯ ಜೊತೆಗೆ ಮಾನವೀಯತೆಯ ಮಂಗಳ ಬೆಳಕನ್ನುಂಟುಮಾಡುವ ಪರಿಸರ ನಿರ್ಮಾಣಕ್ಕೆ ದೀಕ್ಷಾಬದ್ಧರಾಗಬೇಕಾಗಿದೆ. ★







# ನಮ್ಮಲ್ಲಿ ನಿಸರ್ಗೋಪಚಾರ

– ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ',
ನಂ. ೨/೨೦೫೫. ೧೧ನೇ ಕ್ರಾಸ್,
ಎಸ್.ಎಸ್. ಪುರಂ, ತುಮಕೂರು – ೫೭೨ ೧೦೨.
ದೂರವಾಣಿ : (೦೮೧೬) ೨೨೭೮೪೫೫

ನಮ್ಮಲ್ಲಿ ನಿಸರ್ಗೋಪಚಾರ ಯಾವ ತಾರೀಖಿನಿಂದ ಪ್ರಾರಂಭವಾಯ್ತು?

*ಅಪುಮೇ ಸೋಮೋ ಅಬ್ರವೀತ್ ಅಂತರ್ವಿಶ್ವಾನಿ ಭೇಷಜಂ ॥*

*'ನೀರು ವಿಶ್ವೌಷಧವನ್ನು ಒಳಗೊಂಡಿದೆ' - ಹೀಗೆಂದು ಸೋಮನು (ಪರಮಾತ್ಮನು) ಹೇಳಿದನು.*

*ಉದ್ಯನ್ನಾದಿತಃ ಕ್ರಿಮೀನ್ ಹಂತು ನಿಮ್ಲೋಚ್ಛಾನ್ ಹಂತು ರಶ್ಮಿಭಿಃ ॥*

*'ಉದಯಿಸುತ್ತಿರುವ ಸೂರ್ಯನು ಸೂಕ್ಷ್ಮಾತಿಸೂಕ್ಷ್ಮ ಕ್ರಿಮಿಗಳನ್ನು ಕೊಲ್ಲುವನು'.*

*ಆರೋಗ್ಯಂ ಭಾಸ್ಕರಾದಿಚ್ಛೇತ್ - 'ಆರೋಗ್ಯವು ಸೂರ್ಯನ ವರ'.*

*ಅವಾತ ವಾಹಿ ಭೇಷಜಂ ವಿವಾತ ವಾಹೇ ಯದ್ರಪಃ ॥*

*ತ್ವಂ ಹಿ ವಿಶ್ವಭೇಷಜಂ ದೇವಾನಾಂ ದೂತ ಈಯಸೇ ॥*

'ಶರೀರವನ್ನು ಪ್ರವೇಶಿಸುವ ಗಾಳಿ ಔಷಧಿ, ಶರೀರದಿಂದ ಹೊರಹೋಗುತ್ತಿರುವ ಗಾಳಿಯು ದೂಷಿತವಾದದ್ದು, ನೀನು ವಿಶ್ವೌಷಧ, ನೀನು ದೇವದೂತ, ನೀನು ವಿಶ್ವಕಲ್ಯಾಣಕ್ಕಾಗಿ ಬಾ'.

ಇವೆಲ್ಲಾ ವೇದವಾಕ್ಯಗಳು, ಭಾರತೀಯ ನಿಸರ್ಗೋಪಚಾರದ ಉಗಮ ವೇದ. ಆ ಸಂಸ್ಕೃತಿ ಬೆಳೆದದ್ದೇ ನಿಸರ್ಗದ ಮಧ್ಯದಲ್ಲಿ.

*'ಜಯೇತ್ ಅಲ್ಲ ಬಲಾನ್ ವ್ಯಾಧೀನ್ ವ್ಯಾಯಾಮಾತಪ ಮಾರುತೈಃ '*

– ಆಯುರ್ವೇದ.

'ರೋಗವಿನ್ನೂ ಎಳೆಯದಾಗಿರುವಾಗಲೇ ಗಾಳಿ, ಬಿಸಿಲು, ವ್ಯಾಯಾಮಗಳಿಂದ ಅದನ್ನು ಜಯಿಸಬೇಕು. ವೇದದ ಅಂಗವಾದ ಆಯುರ್ವೇದವು ಮುಖ್ಯವಾಗಿ ನಿಸರ್ಗೋಪಚಾರವೇ !

'ಆಯುರ್ವೇದವು ಮೂಲತಃ ಪ್ರಕೃತಿ ಚಿಕಿತ್ಸಾ ರೂಪದಲ್ಲಿಯೇ ಇತ್ತು ; ಮತ್ತು ಇಂದಿಗೂ ಅದರ ಅಂತಃ ತತ್ವಗಳನ್ನು ಪರಿಶೀಲಿಸುವವರಗೆ ಅದು ಪ್ರಕೃತಿ ಚಿಕಿತ್ಸಾ ರೂಪದಲ್ಲಿಯೇ ಇದೆ ಎಂದು ಮನವರಿಕೆಯಾಗುವುದು' - ' ಆಯುರ್ವೇದೀಯ ಪ್ರಕೃತಿ ಚಿಕಿತ್ಸೆ', ಡಾ॥ ಎಂ. ಗೋಪಾಲಕೃಷ್ಣರಾವ್, ಪುಟ - ೨೪.

ನಿಸರ್ಗ ಚಿಕಿತ್ಸೆಯು ಆಯುರ್ವೇದದಲ್ಲಿ ಅಂತರ್ಗತವಾಗಿದ್ದುದರಿಂದ ಇಲ್ಲಿ ಅದು ಬೇರೆಯ ಹೆಸರಿನಿಂದ ಬೆಳೆಯಲಿಲ್ಲ. ಭಾರತಕ್ಕೆ ಅಲೋಪತಿಯ ಆಗಮನವು ದಿನೇ ದಿನೇ ಅಯುರ್ವೇದವನ್ನು ನೇಪಥ್ಯಕ್ಕೆ ತಳ್ಳಿತು. ಆದರೆ, ಅದರ ಪಾರ್ಶ್ವಪರಿಣಾಮಗಳಿಗೆ ಹೆದರಿದ ಮನುಷ್ಯ ಮತ್ತೆ ಆಯುರ್ವೇದದತ್ತ ಮುಖ ಮಾಡಿದ್ದಾನೆ.

ಭಾರತದಲ್ಲಿ ಆಯುರ್ವೇದದಲ್ಲಿ ಅಂತರ್ಗತವಾಗಿದ್ದುದರಿಂದ ಇಲ್ಲಿ ಅದು ಬೇರೆಯ ಹೆಸರಿನಿಂದ ಬೆಳೆಯಲಿಲ್ಲ. ಭಾರತಕ್ಕೆ ಅಲೋಪತಿಯ ಆಗಮನವು ದಿನೇ ದಿನೇ ಆಯುರ್ವೇದವನ್ನು ನೇಪಥ್ಯಕ್ಕೆ ತಳ್ಳಿತು. ಆದರೆ, ಅದರ ಪಾರ್ಶ್ವಪರಿಣಾಮಗಳಿಗೆ ಹೆದರಿದ ಮನುಷ್ಯ ಮತ್ತೆ ಆಯುರ್ವೇದದತ್ತ ಮುಖ ಮಾಡಿದ್ದಾನೆ.

ಆಯುರ್ವೇದ, ಅರ್ಥಪೂರ್ಣವಾದ, ಕಾಲಪರೀಕ್ಷಿತ ವೈದ್ಯವಿದ್ಯೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಅದರೆ, ಅದು ವೈದ್ಯ ಅವಲಂಬಿತ ವಿದ್ಯೆ. ಅಲ್ಲದೆ ಅದು ಸಂಸ್ಕೃತ ಭಾಷೆಯಲ್ಲಿದೆ, ಎಲ್ಲರಿಗೂ ಅರ್ಥವಾಗುವುದಿಲ್ಲ. ಇನ್ನು ಮೂಲಿಕೆಗಳ ಬಗ್ಗೆ ಜ್ಞಾನ ಬೇಕು. ಅವು ಸಿಕ್ಕಬೇಕು. ಹೀಗೆ ಕೆಲವು ಸಮಸ್ಯೆಗಳಿವೆ. ಆದರೆ ನಿಸರ್ಗೋಪಚಾರ ಬಹಳ ಸರಳವಾಗಿದೆ.

'ಗಿಡಮೂಲಿಕೆಗಳನ್ನಾಗಲಿ ಅಥವಾ ಬೇರೆ ಔಷಧಗಳನ್ನಾಗಲಿ ಸ್ವೀಕರಿಸುವುದೆಂದರೆ ಕಸದ ಮೇಲೆ ಮತ್ತಷ್ಟು ಕಸವನ್ನು ಕೂಡಿಹಾಕುವ ದಡ್ಡತನವನ್ನೇ ಮಾಡಿದಂತಾಗುವುದು. ಹೊಲಸನ್ನು ಹೆಚ್ಚೆಚ್ಚು ಬಚ್ಚಿಟ್ಟಂತೆ ಅದು ಹೆಚ್ಚು ಕೊಳೆಯುವುದಷ್ಟೆ? ಮನುಷ್ಯನ ಶರೀರದಲ್ಲೂ ಇದೇ ಪ್ರಕಾರವು' - 'ಪ್ರಕೃತಿ ಚಿಕಿತ್ಸೆ', ಮಹಾತ್ಮಾ ಗಾಂಧಿ.

ಆಯುರ್ವೇದ ಹೀಗೆ ಹೇಳುತ್ತದೆಂದಲ್ಲ, ಮದ್ದಿನ ಮನಸ್ಸಿನ ಮಾನವ ಅಲ್ಲಿಯೂ ಸಹ ಔಷಧಿಗಳನ್ನು ಹುಡುಕುತ್ತಾನೆಯೇ ವಿನಃ ಅದರ ಅಂತಃಸತ್ವದ ಕಡೆ ಗಮನ ಹರಿಸಿಲ್ಲದುದು ಚಿಂತಾಜನಕ ಸ್ಥಿತಿ. ಹೆಸರಿಗಾಗಿ ಬಡಿದಾಡುವುದಕ್ಕಿಂತ ಮೊದಲು ಆಯುರ್ವೇದದ್ದೇ ಚಿಂತನೆಯಾಗಿರುವ ನಿಸರ್ಗೋಪಚಾರವನ್ನು ಅನುಸರಿಸುವುದು ಸುಲಭ ಹಾಗೂ ಸರಳ.

*ಆಯುರ್ವೇದಿಕೆ ನಮ್ಮ ಗೌರವಪೂರ್ಣ ನಮನ*
*ಸದ್ಯದಲಿ ಕೊಡೋಣ ನಿಸರ್ಗೋಪಚಾರಕೆ ನಮ್ಮ ಗಮನ.*

ನಮ್ಮಲ್ಲಿ ನವೀನ ನಿಸರ್ಗೋಪಚಾರಕ್ಕೆ ಮಹಾತ್ಮಾ ಗಾಂಧೀಜಿಯವರು ಅಡಿಪಾಯ ಹಾಕಿದರೆಂದರೂ ತಪ್ಪಾಗಲಾರದು. ಅವರು ಆ ಪದ್ಧತಿಯನ್ನು ಅನುಸರಿಸಲು ಹಾಗೂ ಪ್ರಚುರಪಡಿಸಲು ಕಾರಣ, ಅವರ ನಿಸರ್ಗಪ್ರೇಮ, ಚಿಕಿತ್ಸೆಯ ಸರಳತೆ ಹಾಗೂ ಬಡವರಿಗೆ ಅಂದುವ ಉಪಯುಕ್ತತೆ. ಅವರೇ ಉರುಳೀ ಕಾಂಚನದಲ್ಲಿ ಒಂದು ನಿಸರ್ಗ ಚಿಕಿತ್ಸಾ ಆಸ್ಪತ್ರೆಯನ್ನು ಉದ್ಘಾಟಿಸಿದರು. ಮುಂದೆ ಮೊರಾರ್ಜಿ ದೇಸಾಯಿ ಮುಂತಾದವರು ನಿಸರ್ಗಚಿಕಿತ್ಸೆಗೆ ಒತ್ತು ಕೊಟ್ಟರು. ದಕ್ಷಿಣದಲ್ಲಿ ನಿಸರ್ಗಚಿಕಿತ್ಸೆಗೆ ಭಾರತೀಯ ದರ್ಶನ ಹಾಗೂ ವೇದಾಂತಗಳನ್ನು ಬೆರೆಸಿ ಒಂದು ರೂಪ ಕೊಟ್ಟವರು ಆಚಾರ್ಯ ಲಕ್ಷ್ಮಣಶರ್ಮರು. ಅವರ ಪುಸ್ತಕಗಳಾದ 'Practical Nature Cure' ಹಾಗೂ ಸಂಸ್ಕೃತದಲ್ಲಿ 'ಸ್ವಾಧೀನ ಸ್ವಾಸ್ಥ್ಯ ಮಹಾವಿದ್ಯಾ', ಎಂಬುವು ಅನನ್ಯ ಕೃತಿಗಳು. ಅವರ ಮಕ್ಕಳು ಹಾಗೂ ಶಿಷ್ಯರು ಆ ಪರಂಪರೆಯನ್ನು ಮುಂದುವರಿಸಿದರು. ಬೆಂಗಳೂರಿನಲ್ಲಿ ಡಾ|| ಹೋ. ಶ್ರೀನಿವಾಸಯ್ಯನವರ ನೇತೃತ್ವದಲ್ಲಿ ೧೯೬೯ರಲ್ಲಿ ಸಣ್ಣದಾಗಿ ಪ್ರಾರಂಭವಾದ ಪ್ರಕೃತಿ ಜೀವನ ಕೇಂದ್ರ, ದಿವಂಗತ ಡಾ || ರಾಜನ್, ದಿವಂಗತ ಡಾ|| ಆನಂದರಾವ್, ಡಾ|| ಜಿ.ಪಿ. ರಾವ್ ಅವರುಗಳಿಂದ ಬೆಳೆದು ಈಗ ಡಾ || ಬ್ರಹ್ಮಚಾರಿಗಳ ಕಾರ್ಯದರ್ಶಿತ್ವದಲ್ಲಿ ರಾಷ್ಟ್ರೀಯ ಅಂತರರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲ್ಪಡುವ ಸಂಸ್ಥೆಯಾಗಿ ಬೆಳೆದಿದೆ. ಅದರೊಂದಿಗೆ 'ಕರ್ನಾಟಕ ಪ್ರಕೃತಿ ಚಿಕಿತ್ಸಾ ಪರಿಷತ್' ಡಾ|| ಮುಳ್ಳೂರ್ ಅವರ ಕಾರ್ಯದರ್ಶಿತ್ವದಲ್ಲಿ ಕರ್ನಾಟಕದಾದ್ಯಂತ ಪ್ರಕೃತಿ ಚಿಕಿತ್ಸೆಯನ್ನು ಪ್ರಚುರಪಡಿಸುತ್ತಿದೆ. ಆಂಧ್ರದಲ್ಲಿ ಶ್ರೀವೆಂಕಟರಾವ್ ಅವರ ಕುಟುಂಬವು ಒಂದು ಆಸ್ಪತ್ರೆ ಕಾಲೇಜು ಎಲ್ಲವನ್ನೂ ನಡೆಸಿ, ದಕ್ಷಿಣದಲ್ಲಿನ ಆಸ್ಪತ್ರೆಗಳಿಗೆ ಶಿಷ್ಯರನ್ನು ಕಳುಹಿಸಿದರು. ಈಚೆಗೆ ಅನೇಕ ಆಸ್ಪತ್ರೆಗಳಾಗಿವೆ. ಬೆಂಗಳೂರಿನ ಜಿಂದಾಲ್ (INYS), ಜಯನಗರದ ಮೂರನೇ ಬ್ಲಾಕ್ ಪ್ರಕೃತಿ ಚಿಕಿತ್ಸೆಯ ಆಸ್ಪತ್ರೆ, ಧರ್ಮಸ್ಥಳ, ಬೆಳಗಾಂ, ತುಮಕೂರಿನಲ್ಲಿಯೂ ಶ್ರೀಮತೀ ಸುಲೋಚನಾ ಆರಾಧ್ಯರು ನಿಸರ್ಗಚಿಕಿತ್ಸಾಲಯವನ್ನು ನಡೆಸುತ್ತಿದ್ದಾರೆ. ಹೀಗೆ ಇನ್ನೂ ಅನೇಕ ನಿಸರ್ಗಚಿಕಿತ್ಸಾಲಯಗಳಾಗಿವೆ. ಇವಲ್ಲದೆ ಪ್ರಕೃತಿಚಿಕಿತ್ಸೆಯ ಕಾಲೇಜ್‌ಗಳಾಗಿವೆ. ಅನೇಕ ವೈದ್ಯಪದ್ಧತಿಗಳಿಗೂ ಪ್ರಕೃತ ಚಿಕಿತ್ಸಾ ಪದ್ಧತಿಗೂ ಒಂದು ವ್ಯತ್ಯಾಸವಿದೆ. ಅದೇನೆಂದರೆ, ಆ ಪದ್ಧತಿಗಳಲ್ಲಿ ಆಸ್ಪತ್ರೆಯಲ್ಲಿ ಗುಣಮುಖವಾದ ನಂತರ ಮನೆಯಲ್ಲಿ ಇಷ್ಟ ಬಂದ ಜೀವನ ನಡೆಸಬಹುದು. ಮತ್ತೆ ಕಾಯಿಲೆ ಬೀಳುವವರೆವಿಗೂ ಭಯವಿಲ್ಲ! ಅಲ್ಲದೆ ಆಸ್ಪತ್ರೆ ಮುಖ ನೋಡಬೇಕಾದ ಅವಶ್ಯಕತೆ ಇಲ್ಲ. ಆದರೆ, ಪ್ರಕೃತಿ ಚಿಕಿತ್ಸೆಯಲ್ಲಿ ಹಾಗಾಗುವುದಿಲ್ಲ. ಗಳಿಸಿದ ಆರೋಗ್ಯವನ್ನು ಉಳಿಸಿಕೊಳ್ಳಬೇಕಾದರೆ 'ನಿಸರ್ಗ ಜೀವನ'ಕ್ಕೆ ಮೊರೆ ಹೋಗಲೇಬೇಕು. ಒಂದು ಉತ್ತಮ ಪುಸ್ತಕ, ಅಥವಾ ಒಬ್ಬ ನುರಿತ ಪ್ರಚಾರಕ ಸಿಕ್ಕಿದರೆ ಮನೆಯಲ್ಲಿಯೇ ನಿಸರ್ಗೋಪಚಾರವನ್ನು ಮಾಡಿಕೊಳ್ಳಬಹುದು. ಆಸ್ಪತ್ರೆಗೆ ಹೋಗಲೇಬೇಕೆಂಬ ನಿರ್ಬಂಧವಿಲ್ಲ, ಹೋದರೂ ತಪ್ಪಿಲ್ಲ. ಆದರೆ, ನಮ್ಮ ಆರೋಗ್ಯಕ್ಕೆ ಸದಾ ಬೇರೆಯವರ ಮೇಲಿನ ಅವಲಂಬನೆ ಬೇಕಿಲ್ಲ. ಪ್ರಾರಂಭದಲ್ಲಿ ನಿಸರ್ಗೋಪಚಾರ ಪರಿಚಾರಕರಿಂದ ಸಲಹೆ ಪಡೆಯಬಹುದು. ಡಾಕ್ಟರೇಟ್ ಪಡೆಯದೇ ಮನೆಗಳಲ್ಲಿಯೇ ಸಾಧನೆ ನಡೆಸುವ ಅನೇಕ ಸಾಧಕರು ನಿಮ್ಮ ಪರಿಸರದಲ್ಲೂ ಇರಬಹುದು. ಅವರಿಂದ ಸಹಾಯ ಪಡೆಯಿರಿ. ಇಂದಿನ ಜೀವನಪದ್ಧತಿ 'ನಿಸರ್ಗ ಜೀವನ'ದಿಂದ ದೂರವಾಗಿರುವುದರಿಂದ ಅದನ್ನು ಅನುಸರಿಸುವುದು ಕೊಂಚ ಕ್ಲಿಷ್ಟ, ಒಂದು ಸಂಘ ಎಂಬ ಕೋಟೆಯನ್ನು ಕಟ್ಟಿಕೊಂಡು ಅದರ ಒಳಗೆ ವಾಸಿಸುವುದೇ ಹೆಚ್ಚು ಸುರಕ್ಷಿತ. ತುಮಕೂರಿನ 'ನಿಸರ್ಗಜೀವನ ಮಿತ್ರವೃಂದ- ಇಂತಹ ಸಂಸ್ಥೆಗಳಲ್ಲಿ ಒಂದು. ಅಂತಹ ಸಂಸ್ಥೆಗಳ ಸಂಖ್ಯೆ ಹೆಚ್ಚಬೇಕು. ರೋಗನಿವಾರಣೆಗಿಂತ 'ಆರೋಗ್ಯ ವಿಜ್ಞಾನ' ಎಂಬ ಜ್ಞಾನದ ಕಡೆ ಹೆಚ್ಚು ಮನಸ್ಸನ್ನು ಹರಿಸಬೇಕು.

ಈಗ ಪ್ರಕೃತಿ ಚಿಕಿತ್ಸೆಗೆ, ನಂಬಿಕಾ ಚಿಕಿತ್ಸೆ *(Faith Healing)*, ಸೂಜಿ ಚಿಕಿತ್ಸೆ *(Acupuncture)*, ಬಿಂದೊತ್ತಡ ಚಿಕಿತ್ಸೆ *(Acupressue)*, ವರ್ಣ ಚಿಕಿತ್ಸೆ *(Colour Therapy)*, ವಾಸನಾ ಚಿಕಿತ್ಸೆ *(Aroma Therapy)*, ರೇಖಿ *(Reiki)*, ಅಯಸ್ಕಾಂತ ಚಿಕಿತ್ಸೆ *(Magneto Therapy)*, ಬೆನ್ನುಹುರಿ ಚಿಕಿತ್ಸೆ, ಎಲುಬು ಚಿಕಿತ್ಸೆ *(Osteopathy)*, ಮಸಾಜ್ *(Massae)*, ನೇತ್ರ ಚಿಕಿತ್ಸೆ *(Iridology)*, ಸಂಗೀತ ಚಿಕಿತ್ಸೆ *(Musico Therapy)*, ಸುಜೋಕ್ *(Sujok)* ಮುಂತಾದ ಔಷಧರಹಿತ ಪದ್ಧತಿಗಳನ್ನು ಸೇರಿಸಲಾಗಿದೆ. ರೋಗಿಯ ನೋವಿನ ನಿವಾರಣೆಗೆ ಕೊಂಚ ಸಹಾಯ ತಪ್ಪಲ್ಲ. ಆದರೆ, ಇವೆಲ್ಲಾ ಚಿಕಿತ್ಸೆಗಳೂ 'ನಿಸರ್ಗೋಪಚಾರ' ಎಂಬ ಅಡಿಪಾಯದ ಮೇಲೆ ಕಟ್ಟಲ್ಪಡಬೇಕಾಲ್ಲದೆ, ಬರೀ ಚಿಕಿತ್ಸಾ ದೃಷ್ಟಿಯಿಂದ ಇಂತಹವುಗಳ ಸಂಖ್ಯೆಯನ್ನು ಬೆಳೆಸುತ್ತಾ ಹೋಗುವುದು ಒಳ್ಳೆಯದಲ್ಲ. ಇವಕ್ಕೆಲ್ಲಾ ಒಬ್ಬ ಅನುಭವಿಯ, ವೈದ್ಯನ ಅಥವಾ ಚಿಕಿತ್ಸಾಲಯದ, ಅಗತ್ಯ ಬೀಳುತ್ತದೆ. ನಿಸರ್ಗೋಪಚಾರಕ್ಕೂ ಸಹ ಹೊಸದರಲ್ಲಿ ಒಬ್ಬ ಅನುಭವಿ ಅಥವಾ ವೈದ್ಯ, ಚಿಕಿತ್ಸಾಲಯ ಯಾವುದಾದರೊಂದರ ಸಹಾಯ ತೆಗೆದುಕೊಳ್ಳುವುದು ಉತ್ತಮ. ನಂತರದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತಾನೇ ಸ್ವತಃ ಆರೋಗ್ಯದಲ್ಲಿ ನಿಸರ್ಗಜೀವನವನ್ನು, ಆಕಸ್ಮಿಕ ರೋಗ ಬಂದಲ್ಲಿ ನಿಸರ್ಗೋಪಚಾರವನ್ನು ಮನೆಯಲ್ಲಿಯೇ ಅನುಸರಿಸಬೇಕು. ನಿಸರ್ಗದ ಭಾಷೆ ಅವನಿಗೇ ತುಂಬಾ ಹತ್ತಿರವಾಗಿರುವುದರಿಂದ ಚಿಕಿತ್ಸೆಯಲ್ಲಿ ಅದು ಮೊದಲ ಸ್ಥಾನಗಳಿಸುತ್ತದೆ. ನಂತರ ಔಷಧಿರಹಿತ ಚಿಕಿತ್ಸೆಗಳು, ನಿಸರ್ಗದಿಂದ ದೂರವಾಗುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ನಿಸರ್ಗ ಜೀವನ ಹಾಗೂ ನಿಸರ್ಗೋಪಚಾರ ಮೊದಲ ಅವಶ್ಯಕತೆ.

*ಹೇ ! ಮನುಜ ! ನಿಸರ್ಗದ ಕಡೆ ತಿರುಗಿ*
*ಇಲ್ಲದಿರೆ ಜೀವನವೆಲ್ಲಾ ಬರೀ ಕೊರಗು*

*







# ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು
ಪ್ರಾಧ್ಯಾಪಕರು,
ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜು,
ಶ್ರೀ ಸಿದ್ಧಗಂಗಾ ಕ್ಷೇತ್ರ

## ಭಾಗ-೧೫

ನಿಗ್ರಹಾನುಗ್ರಹ ಸಮರ್ಥರಾದ ಶ್ರೀ ಸಿದ್ಧಲಿಂಗೇಶ್ವರರು ಹೆಬ್ಬೂರ ಹಿರಿಯಭಕ್ತರ ಸೇವೆಯನ್ನು ಕೈಗೊಂಡು ಒಪ್ಪುತ್ತಿರಲಾಗಿ ಇತ್ತ ಗೂಳೂರು ಭಕ್ತರು ಶಿವಯೋಗಿಗಳನ್ನು ತಮ್ಮೂರಿಗೆ ಬಿಜಯಂ ಗೈಸಲು ಸನ್ನಿಧಿಗೆ ಬರುತ್ತಾರೆ. ಅವರ ಭಕ್ತಿಯಿಂದ ಕೂಡಿದ ಬಿನ್ನಹವನ್ನು ಅಂಗೀಕರಿಸಿ ಶಿವಯೋಗಿಗಳು ಗೂಳೂರು ನಗರಕ್ಕೆ ದಯಮಾಡಿಸುತ್ತಾರೆ. ಆಗ ಆ ಪುರದ ಸತ್ಯರು, ಶಾಂತರು ಸುಗುಣಭರಿತರು, ಸಾತ್ವಿಕರು, ಪರಮ ದಾಸೋಹಿಗಳು, ಪ್ರಸಾದನಿಷ್ಠರು, ಶೀಲನೇಮಿಗಳು, ವ್ರತಿಗಳು, ಶರಣರು ಚರಲಿಂಗಭಕ್ತರು, ಪಂಡಿತರು ಪಾಮರರು ಎಲ್ಲರೂ ಶಿವಯೋಗಿಯ ಪುಣ್ಯದರ್ಶನಕ್ಕಾಗಿ ನೆರೆಯುತ್ತಾರೆ. ಕೈಮುಗಿದು ಭಕ್ತಿಯಗೂಡಾಗಿ ದಿವ್ಯಚರಣದಲ್ಲಿ ಹಣೆಯಿಟ್ಟು ಹೊಗಳಿ ಸಂತೋಷ ಪಡುತ್ತಾರೆ. ನಂತರ, ನಮ್ಮೂರಿಗೆ ದಯಮಾಡಿರುವ ಈ ಸಿದ್ಧೇಶ್ವರನ ಹೆಸರಿನಲ್ಲಿ ಪರ್ವವನ್ನು ಮಾಡಲೆಂಬುದಾಗಿ ನೆರೆದ ಭಕ್ತರೆಲ್ಲರೂ ಸಂಕಲ್ಪಮಾಡುತ್ತಾರೆ. ಜಾತ್ರೆಯ ದಾಸೋಹಕ್ಕಾಗಿ ನೆರೆ ಊರಿನ ಮತ್ತು ಊರಿನ ಸದ್ಭಕ್ತರ ಮನೆಮನೆಗೆ ಹಿಟ್ಟಿನ ಭಿಕ್ಷೆಯನ್ನು ಕೈಗೊಂಡು ಹೋಗಿ ಬೇಕಾದ ಪಡಿ-ಪದಾರ್ಥಗಳನ್ನು ಸಂಗ್ರಹಿಸಿ ಗುರುಲಿಂಗಜಂಗಮ ಪ್ರೇಮಿಯಾದ ಲಿಂಗಣ್ಣನೆಂಬುವನ ಭಕ್ತನ ಮನೆಯಲ್ಲಿ ಒಟ್ಟುತ್ತಾರೆ. ಜಂಗಮದಾಸೋಹಕ್ಕಾಗಿ ಸಂಗ್ರಹಿಸಿದ ಪದಾರ್ಥಗಳಲ್ಲಿ ಬದನೇಕಾಯಿಯ ಮೇಲೆ ಆ ಲಿಂಗಣ್ಣನ ಹೆಂಡತಿಗೆ ಆಸೆಯುಂಟಾಗುತ್ತದೆ. ಗಂಡನಿಗೆ ಗೊತ್ತಾಗದಂತೆ ಒಂದು ಬದನೆಕಾಯಿಯನ್ನು ಕದ್ದು ಸುಡಲು ಮನೆಯ ಬೆಂಕಿಯಲ್ಲಿಡುತ್ತಾಳೆ. ಆಗ "ಓಹೋ! ಅಗಸ್ತ್ಯ ಮಹರ್ಷಿಯ ಉಪಕರಣಗಳನ್ನು ತಿಳಿಯದೇ ನುಂಗಿ ಆಪೋಷಣಕ್ಕೊಳಗಾಗಿ ಕೆಟ್ಟು ಹೋದ ಸಮುದ್ರನಂತೆ; ಜಂಗಮ ದಾಸೋಹಕ್ಕೆಂದು ಮೀಸಲು ತೆಗೆದ ಈ ಬದನೆಕಾಯಿಯನ್ನು ನಾನು ಸುಟ್ಟೆನಾದರೆ ಯತಿಯ ಕೋಪಾಗ್ನಿಗೆ ತುತ್ತಾಗಿ ನಾನೇ ಸುಟ್ಟುಹೋಗುವೆನೆಂಬ" ಭಯದಿಂದ ಅಗ್ನಿಯು ಆ ಬದನೆಕಾಯಿಯನ್ನು ಸುಡಲಿಲ್ಲ. ನೆರೆಮನೆಯ ಇಂಗುಳದ ಜೊತೆಯಲ್ಲಿ ನೀರೊಲೆಯಲ್ಲಿಟ್ಟರೂ ಬದನೆಕಾಯಿ ಸುಡುವುದಿಲ್ಲ. ಮೇಲಾಗಿ ಇನ್ನೂ ಹಸಿರೇರುತ್ತದೆ.

ಆಗ ನೆರೆಮನೆಯ ಹಿಮ್ಮನೆಯ ಮುಮ್ಮನೆಯ ನಾರಿಯರೆಲ್ಲರೂ ಸೇರಿ ವಿಚಾರಮಾಡುತ್ತಾರೆ. ವಿಚಾರಮಾಡಿ ಆಶ್ಚರ್ಯಪಡುತ್ತಾರೆ. ಸಿದ್ಧೇಶನ ಪರ್ವಕ್ಕೆ ಮೀಸಲ್ ತೆಗೆದ ಬದನೆಕಾಯಿಗೆ ಅಳುಪಬಹುದೇ? ತಿನ್ನುವ ಆಸೆಯಿಂದ ಕದಿಯಬಹುದೆ? 'ಜಂಗಮದ ಒಡವೆ ಎಂದರೆ ಸದರವೆ'? ಎಂದು ಝೇಂಕಿಸುತ್ತಾರೆ. ಆಗ ಆ ಸತಿಯು ಏನು ಕೇಡಾಗುವುದೋ" ಎಂದು ಬೇಗುದಿಗೊಂಡು ತಲೆತಗ್ಗಿಸಿ ನಿಲ್ಲುತ್ತಾಳೆ. ನಂತರ ಆ ರಮಣಿಯರೆಲ್ಲರೂ ಕೂಡಿ ಆ ಬೇಯದ ಬದನೆಕಾಯಿಯನ್ನು ಹರಿವಾಣದಲ್ಲಿಟ್ಟು ಹೂವುಗಳಿಂದ ಪೂಜಿಸಿ ತೆಗೆದುಕೊಂಡು ಆಕೆಯನ್ನು ಕರೆದುಕೊಂಡು ಜಗದಾರಾಧ್ಯ ತೋಂಟದ ಸಿದ್ಧೇಶ್ವರರ ಸನ್ನಿಧಾನಕ್ಕೆ ಬರುತ್ತಾರೆ. ರಮಣೀಯರು ಬದನೇಕಾಯಿಯನ್ನು ಶಿವಯೋಗಿಗಳ ಹಸ್ತನೀಡುತ್ತಾರೆ. ಆ ಸತಿ ಪಾದದಲ್ಲಿ ಮುಡಿಯಿಡುತ್ತಾಳೆ. ಆಗಾ ಮಹಾಜಂಗಮಕ್ಕೆ ಎಲ್ಲವೂ ವೇದ್ಯವಾಗಿ ಕಾರುಣ್ಯದಿಂದ ಆಕೆಯನ್ನು ತಲೆಹಿಡಿದೆತ್ತಿ "ಎಲೆ ಮಗಳೆ! ಈ ಬದನೆಕಾಯಿಯನ್ನು ಸುಟ್ಟುತಿನ್ನು. ನಿನಗೆ ಪುತ್ರಸಂತಾನ ಪ್ರಾಪ್ತಿಯಾಗುವುದು. ಹೋಗು" ಎಂದು ಹರಸಿ ಕಳುಹಿಸಿಕೊಡುತ್ತಾರೆ. ಅದರಂತೆ ಆಕೆ ಪುತ್ರನ್ನನ್ನು ಹೆತ್ತು ಶಿವಯೋಗಿಯ ಹೆಸರನ್ನೇ ಅದಕ್ಕಿಟ್ಟು ಸಿದ್ಧಲಿಂಗೇಶ್ವರನೆಂದು ಕರೆದು ಸಂತೋಷದಿಂದಿರುತ್ತಾಳೆ. ಇತ್ತ ಧಗಧಗಿಸುವ ಬೆಂಕಿ ಬದನೆಕಾಯಿಯ ಸುಡದುದು 'ಶ್ರೀಪತಿ ಪಂಡಿತರು ರೇಷ್ಮೆವಸ್ತ್ರದಲ್ಲಿ ಕೆಂಡವನ್ನು ಕಟ್ಟಿ ಬನ್ನಿ ಮರದಲ್ಲಿಟ್ಟಾಗ ಅಗ್ನಿ ರೇಷ್ಮೆಬಟ್ಟೆಯನ್ನು ಸುಡದೇ ಇದ್ದುದಕ್ಕೆ; ಖೂಳರಾದ ಜೈನರು ಜಿನಾಲಯದಲ್ಲಿ ಶಿವಭಕ್ತರಾದ ತಿರುಜ್ಞಾನ ಸಂಬಂಧಿಗಳನ್ನು ಕಟ್ಟಿಹಾಕಿ ಹುಲ್ಲಿನರಾಶಿಯನ್ನೊಟ್ಟಿ ಬೆಂಕಿ ಹಚ್ಚಿದಾಗ ಸುಡದೇ ಇದ್ದುದಕ್ಕೆ ಹಾಗೂ ವರದಾನಿ ರಾಮಯ್ಯ ಶರಣನು ಬಸವಪುರಾಣವನ್ನು ಓದುತ್ತಿರುವಾಗ ಜೈನರು ಅದು ಎತ್ತಿನ ಪುರಾಣ ಎಂದು ನಿಂದಿಸಲು ಅವರನ್ನು ಭಂಗಿಸಲು ಪುರಾಣವನ್ನು ಧಗಧಗಿಸುವ ಬೆಂಕಿಯಲ್ಲಿ ಹಾಕಲು ಸುಡದೇ ಇದ್ದುದಕ್ಕೆ ಸಮಾನವೆಂಬುದಾಗಿ ಶಿವಯೋಗಿಗಳನ್ನು ಭಕ್ತರು ಕೊಂಡಾಡಿದರು. ಹೀಗಿರುವಾಗ ಆ ಗೂಳೂರಿನಲ್ಲಿ ಒಬ್ಬ ಭಕ್ತನಿದ್ದ. ಆತ ಯಾವುದೋ ಒಂದು ಬಗೆಯ ಅಂಟುಜ್ವರದಿಂದ ಬಳಲುತ್ತಿದ್ದ ಶಿವಯೋಗಿಯ ಪೂಜೆಮಾಡಿಸಿ ತೀರ್ಥಪ್ರಸಾದಗಳನ್ನು ಸೇವಿಸಿ ರೋಗದಿಂದ ವಿಮುಕ್ತಿ ಪಡೆಯಲು ಬಯಸಿ ಒಂದು ರಾತ್ರಿ ಬಿನ್ನಹ ಹಾಕಿದ. ಅವನ ಬಿನ್ನಹ ಕ್ಕೊಡಂಬಟ್ಟು ಶಿವಯೋಗಿಗಳು ಜೊತೆಯಲ್ಲಿದ್ದ ಎಲ್ಲ ಷಟ್‌ಸ್ಥಲ ಬ್ರಹ್ಮಿಗಳೊಡನೆ ಲಿಂಗಾರ್ಪಿತವನ್ನು ಮಾಡಲು ಭಕ್ತನ ಮನೆಗೆ

ಬಿಜಯಂಗೈಸುತ್ತಾರೆ. ಪ್ರಸಾದನೇಮಿಗಳಿಗೆ ಪತ್ರದಲ್ಲಿ ಎಡೆಮಾಡದೆ ತಳಿಗೆಗಳಲ್ಲಿ ಎಡೆಮಾಡಬೇಕೆಂಬುದು ಸಮಯವಾಗಿತ್ತು. ಆದರೆ ಶಿವಯೋಗಿಯ ಸಹಪಂಕ್ತಿಯಲ್ಲಿ ಎಲ್ಲ ಜಂಗಮರಿಗೂ ಏಕಕಾಲದಲ್ಲಿ ಪ್ರಸಾದ ಉಣಬಡಿಸುವಷ್ಟು ತಳಿಗೆಗಳು ಆ ಭಕ್ತನ ಮನೆಯಲ್ಲಿರಲಿಲ್ಲ. ಇದನ್ನು ಗೊತ್ತುಮಾಡಿಕೊಂಡ ಗೂಳೂರ ಹರದರೆಲ್ಲರೂ 'ನಮ್ಮ ನಮ್ಮ ಮನೆಯ ತಳಿಗೆಗಳನ್ನು ಕೊಟ್ಟರೆ ತಳಿಗೆಗಳ ಮುಖಾಂತರ ನಮಗೂ ಜ್ವರದ ಅಂಟುಸೋಂಕಬಹುದು. ಆದ್ದರಿಂದ ಯಾರೂ ಏನು ಮಾಡಿದರೂ ತಳಿಗೆಗಳನ್ನು ಕೊಡಬಾರದು' ಎಂದು ತೀರ್ಮಾನಿಸಿ ತಂತಮ್ಮ ಮನೆಯ ತಲೆಬಾಗಿಲುಗಳನ್ನು ಮುಚ್ಚಿಕೊಂಡು ಒಳಗೆ ಇದ್ದರು. ಈತ ಹೋಗಿ ಎಲ್ಲರ ತಲೆಬಾಗಿಲ ಮುಂದೆ ನಿಂತು ಅವರವರ ಹೆಸರುಗಳನ್ನು ಹಿಡಿದುಕೂಗಿ ತಳಿಗಿಗೆಗಳನ್ನು ಕೊಡಿರೆಂದು ಕೂಗಿ ಬೇಡುತ್ತಾನೆ. ಆದರೆ ಯಾರೂ ಕೊಡುವುದಿರಲಿ ಮಾತನ್ನೇ ಆಡದೇ ಒಳಗೇಯಿರುತ್ತಾರೆ. ಆಗ ತಳಿಗೆಗಳು ದೊರೆಯದೆ, ಏನು ಮಾಡುವುದೆಂದು ಚಿಂತಿಸುತ್ತಾ ಮರಳಿಬಂದು ಶ್ರೀಗುರುವಿನ ಪಾದದ ಮೆಲೆ ಬಿದ್ದು ಈ ಜನಸಂದೇಹಪಟ್ಟುಕೊಂಡರೆಂದು ಹೇಳುತ್ತಾನೆ. ಆಗ ಸಿದ್ಧಲಿಂಗೇಶ್ವರರು ನಸುನಗುತ್ತಾ, ಮತ್ತೊಮ್ಮೆ ನೀನೀಗಹೋಗಿ ಹರಿವಾಣಗಳನ್ನು ಬೇಡು, ಹೋಗು ಎಂದು ಕಳುಹಿಸುತ್ತಾರೆ. ಅದರಂತೆ ಗುರುವಾಕ್ಯದಲ್ಲಿ ಶ್ರದ್ಧೆಯಿಟ್ಟು ಮತ್ತೆಬೇಡಲು ಹೋಗುತ್ತಾನೆ. ಅವನು ಅವರವರ ಮನೆಯಮುಂದೆ ಹೋಗಿನಿಲ್ಲುವುದೇ ತಡ ಅವಷ್ಟಕ್ಕೆ ಅವೇಕದಗಳು ತೆರೆದುಕೊಳ್ಳುತ್ತವೆ. ಆ ಭಕ್ತನಿಗಾಗಿ ಶ್ರೀ ಸಿದ್ಧಲಿಂಗೇಶ್ವರೇ ಕದಗಳನ್ನು ತೆರೆದರೆಂಬುದಾಗಿ ಭಾವಿಸುತ್ತಾರೆ. ಅವರ ಮನೆಗಳೂ ಬದಲಾವಣೆಯಾಗಿರುತ್ತದೆ. ಈತ ಹೋದ ತಕ್ಷಣವೇ ಸ್ವಯಂ ತಂತಮ್ಮ ಮನೆಗಳಲ್ಲಿದ್ದ ತಳಿಗೆಗಳನ್ನೆಲ್ಲಾ ತಂದೊಪ್ಪಿಸುತ್ತಾರೆ. ಆದರೆ ಅವರಲ್ಲಿ ಒ..್ಬಗೃಹಿಣಿ ಮಾತ್ರ ಕೊರಚಾಡಿ ಕೊಡದೇ ಒಳಗೆ ಹೋಗುತ್ತಾಳೆ. ಆದರೆ ಒಳಗೆ ಹೋಗಿ ನೋಡುವಷ್ಟರಲ್ಲೇ ಆಕೆಯ ಮನೆಯಲ್ಲಿದ್ದ ತಳಿಗೆಗಳೆಲ್ಲಾ ನುಣ್ಣಗೆ ಅದೃಶವಾಗಿರುತ್ತವೆ. ಆಕೆ ಪಶ್ಚಾತ್ತಾಪಪಟ್ಟು ಓಡೋಡಿ ಬಂದು ಗುರುವಿನ ಪಾದದ ಮೇಲೆ ಬಿದ್ದು ಕ್ಷಮೆಯಾಚಿಸುತ್ತಾಳೆ. ಕ್ಷಮಾಶೀಲರಾದ ಶಿವಯೋಗಿಗಳು ಆಕೆಯನ್ನು ಆಶೀರ್ವದಿಸಿ ತಳಿಗೆಗಳ ರಾಶಿಯನ್ನೇ ಆಕೆಯ ಮುಂದೆ ಸೃಷ್ಟಿಸುತ್ತಾರೆ. ಆಕೆ ಚೋದ್ಯಪಟ್ಟು ತನ್ನ ತಳಿಗೆಗಳನ್ನು ಮಾತ್ರ ಕೊಂಡು ಮನೆಗೆ ಹೋಗುತ್ತಾಳೆ. ಇತ್ತ ಸಿದ್ಧಲಿಂಗೇಶ್ವರರು ಹಾಗೂ ಶಿಷ್ಯವೃಂದ ಭಕ್ತನ ಮನೆಯಲ್ಲಿ ಲಿಂಗಾರ್ಪಿತವನ್ನು ಮಾಡಿ ಅವನನ್ನು ಹರಸಿ ಆಶೀರ್ವದಿಸುತ್ತಾರೆ. ಇತ್ತ ಭಕ್ತರು, ಆ ಸತಿಯ ಮನೆಯ ತಳಿಗೆಗಳು ಅದೃಶ್ಯವಾದದ್ದು ಪೊನ್ನಾಂಬಲೇಶ್ವರನು ತಿರುನೀಕಂಠನಿಗೆ ಕೊಟ್ಟ ಪಾತ್ರೆ ಮಾಯವಾದಂತೆ; ಶಿವನು ತಿರುವೆಲ್ಲೂರಿನ ಭಕ್ತ ಅಮರನೀತಿಯೆಂಬುವನ ಮನೆಯಲ್ಲಿಟ್ಟ ಕೌಪೀನ ಮಾಯವಾದಂತೆ ಇದು ಚೋದ್ಯವೆಂದು ಭಾವಿಸಿದರು.

ಇಂತಿರಲು ಅದೇ ಗೂಳೂರಿನಲ್ಲಿ ಮಲ್ಲಿಸೆಟ್ಟಿ ಎಂಬ ವರ್ತಕನಿದ್ದ ಆತನೊಮ್ಮೆ ಶ್ರೀಸಿದ್ಧಲಿಂಗೇಶ್ವರರ ದರ್ಶನಕ್ಕೆಂದು ಬಂದಾಗ ಆ ಸಮಯದಲ್ಲಿ ಶಿವಪೂಜೆಯು ನಡೆಯುತ್ತಿದ್ದು ಪಾದೋದಕದ ಸ್ವೀಕಾರವು ನಡೆಯುತ್ತಿತ್ತು. ಆಗ ಈ ಮಲ್ಲಸೆಟ್ಟಿಯು ಆ ಜಂಗಮದ ಪಾದೋದಕಕವನ್ನು ಕರದೊಳಗೆ ಸ್ವೀಕರಿಸದೇ ಮನೆಗೆಕೊಂಡುಹೋಗಿ ಶಿವಾರ್ಚನೆಯನ್ನು ಮಾಡಿ ಸ್ವೀಕರಿಸುವೆನೆಂಬುದಾಗಿ ಪಾತ್ರೆಯಲ್ಲಿ ತುಂಬಿಸಿಕೊಂಡು ಮನೆಗೆ ಒಯ್ಯುತ್ತಾನೆ. ನಂತರ ಮನೆಯಲ್ಲಿ ಲಿಂಗಾರ್ಚನೆಮಾಡಿದರೂ ಬಹುವ್ಯಾಪಾರಚಿಂತೆಯಲ್ಲಿ ಅನ್ಯಮನಸ್ಕನಾದುದರಿಂದ ಪಾದೋದಕವನ್ನು ಸ್ವೀಕಾರಮಾಡದೇ ಮರೆತು ಬಚ್ಚಲಿಗೆ ಚೆಲ್ಲಿ ಬಿಡುತ್ತಾನೆ. ಆ ಹರದನಿಂದ ನಡೆಯಲಿರುವ ಅಕೃತ್ಯವು ಶಿವಯೋಗಿಗಳವರ ಚಿತ್ತಕ್ಕೆ ವೇದ್ಯವಾಗುತ್ತದೆ. ಆ ಕೂಡಲೇ ಶ್ರೀಗಳು ಆ ಪಾದೋದಕವನ್ನು ಜಾಗರೂಕತೆಯಿಂದ ತರಿಸಿ ಬೇರೆ ಭಕ್ತನೊಬ್ಬನಿಗೆ ಕೊಡುತ್ತಾರೆ. ಇತ್ತ ಮಲ್ಲಶೆಟ್ಟಿಯು ಮಧ್ಯಾಹ್ನ ಅಂಗಡಿಯಿಂದ ಊಟಕ್ಕಾಗಿ ಮನೆಗೆ ಬಂದು ಸ್ನಾನಮಾಡಿ ಲಿಂಗಾರ್ಪಣೆಮಾಡಲು ಸಜ್ಜಿಗೆಯನ್ನು ತೆಗೆಯುತ್ತಾನೆ. ಕರಡಿಗೆಯೊಳಗಿದ್ದ ಲಿಂಗವೇ ಅದೃಶ್ಯವಾಗಿದೆ! ಸೆಟ್ಟಿಗೆ ಭಯ ಆತಂಕಗಳು ಆರಂಭವಾದವು. ಅಂಗದಿಂದ ಲಿಂಗವಿಯೋಗವಾದುದಕ್ಕೆ ಬಹಳವಾಗಿ ಚಿಂತೆ ಹತ್ತಿತ್ತು. ದೀಕ್ಷೆ ತೆಗೆದುಕೊಳ್ಳುವಾಗ ಪ್ರಾಣದಂತೆ ಪ್ರಾಣಲಿಂಗವನ್ನು ಅಗಲದೇ ಎಚ್ಚರಿಕೆಯಿಂದಿರುತ್ತೇನೆಂಬ ಪ್ರತಿಜ್ಞೆಯನ್ನು ಪಾಲಿಸಿಕೊಂಡು ಬಂದವನು ಆ ಸೆಟ್ಟಿ ಲಿಂಗವಿಯೋಗಕ್ಕೆ ನೂರಾರು ಕಾರಣಗಳನ್ನು ಊಹಿಸುತ್ತಾನೆ. ಈ ಕಾರಣಗಳೆಲ್ಲಾ ಭಕ್ತಮಾರ್ಗಕ್ರಿಯಾಚರಣೆ ಸ್ಥಲದ ಸಂಹಿತೆಗಳಾಗಿವೆ. ಆತನು ಊಹಿಸುವ ಕಾರಣಗಳನ್ನು ಕೇಳಿರಿ : ಶಿವನಿಂದೆಯ ಮಾಡಿದೆನೋ, ಶಿವಾಚಾರವ ಮೀರಿದೆನೋ, ಗುರುಲಿಂಗಜಂಗಮರಲ್ಲಿ ಭೇದವೆಣಿಸಿದೆನೋ, ಪರಮತವಹೊಗಳಿ ಶಿವಮತವ ನಿಂದಿಸಿದೆನೋ, ಶಿವಭಕ್ತರ ನೋಯಿಸಿದೆನೋ, ಅನ್ಯದೈವವ ಸ್ತುತಿಸಿದೆನೋ, ಅಷ್ಟಾವರಣವ ಹಳಿದನೋ, ಅನ್ಯಸತಿಯರಿಗೆ ಅಳುಪಿದೆನೋ, ಅನ್ಯಾಯದಪರವಾಗಿ ಕೂಟಸಾಕ್ಷಿಯನ್ನು ಹೇಳಿದೆನೋ, ಹೂದೋಟ ಗೋಷ್ಠಿ ದೇವಾಲಯಗಳ ಬಳಿ ಮಲಮೂತ್ರಗಳನ್ನು ವಿಸರ್ಜಿಸಿದೆನೋ, ಜೀವಿಗಳ ಹಿಂಸೆ ಮಾಡಿದೆನೋ, ಕಲಧರ್ಮವನ್ನು ಮೀರಿದೆನೋ, ಅನ್ಯಕುಲದರೊಡನೆ ಬೆರೆದೆನೋ, ಸಜ್ಜನರಬಾಧಿಸಿದೆನೋ, ಪಶುಭೃತ್ಯರನ್ನು ಸಲಹದಾದೆನೋ, ಸದ್ಧರ್ಮವ ಪಾಲಿಸದಾದೆನೋ ಭವಿಗಳ ಮನೆಯಲ್ಲಿ ಉಂಡೆನೋ, ಪರಧನವ ವಂಚಿಸಿದೆನೋ, ಗುರುಪತ್ನಿಯನ್ನು ಕೂಡಿದೆನೋ, ಗುರುವನ್ನು ನಿಷ್ಠುರವಾಗಿ ನುಡಿದೆನೋ, ದಾಸೀ ವೇಶ್ಯೆಯರ ಎಂಜಲತಿಂದನೋ, ಗುರುಲಿಂಗ ಜಂಗಮದ ತೀರ್ಥ ಪ್ರಸಾದಕ್ಕೆ ಓಕರಿಸಿದೆನೋ, – ಹೀಗೆ ನಾನಾ ವಿಧವಾಗಿ (ದೇವರು ಕೈಬಿಟ್ಟದ್ದಕ್ಕೆ ದೇವರು ಎಂದರೆ ಶರಣರಲ್ಲಿ ಲಿಂಗ ಎಂದರ್ಥ ಅಥವಾ ಪರ್ಯಾಯ ಪದ. ನೋಡಿರಿ – ''ದೇವ ಸಹಿತ ಭಕ್ತನು ಮನೆಗೆ ಬಂದರೆ ... ಎಂಬ ಬಸವಣ್ಣನವರ ವಚನವನ್ನು) ಲಿಂಗ ಅದೃಶ್ಯವಾದುದಕ್ಕೆ ಕಾರಣಗಳನ್ನು ಚಿಂತಿಸಿದರು. ಕೊನೆಗೆ ತಾನು ಮಾಡಿದ ಪಾದೋದಕವನ್ನು ಬಚ್ಚಲಿಗೆ ಎರೆಚಿದ ಅಪರಾಧ ನೆನಪಿಗೆ ಬರುತ್ತದೆ. ಕೂಡಲೇ ಓಡೋಡಿ ಬಂದು ಶಿವಯೋಗಿಯ ಪಾದಕ್ಕೆರಗಿ ಕ್ಷಮೆಯನ್ನು





ಯಾಚಿಸುತ್ತಾನೆ. ಆಗ ಶ್ರೀಸಿದ್ಧೇಶ್ವರರು 'ಎಲೆಲೆ ಅಜ್ಞಾನಿ! ಮಹಾದೇವನು ಮನುಷ್ಯರ ಕಣ್ಮುಂದೆ ಮುಂದೆ ಧನಧಾರುಣಿ – ವನಿತೆಯರೆಂಬ ಕಸವ ಚೆಲ್ಲಿ ಮಾಯೆಯೆಂಬ ರಕ್ಕಸಿಯನ್ನು ಬಿಟ್ಟಿರುತ್ತಾನೆ. ಆ ಕಸವ ಪಡೆಯಲು ತೊಡಗಿ ಮಾಯೆಗೆ ಸಿಲುಕದೇಯಿರುವ ಮನುಜರೇ ಇಲ್ಲ. ಈ ಕಾಂಚನ ಕಾಮಿನಿಯರ ಆಸೆಯನ್ನು ಗೆದ್ದು ಮಾನವನೇ ಮಹಾದೇವನಾಗುವನು. ಹೀಗೆ ಮಾಯೆಯ ಕೋಟಲೆಗೊಳಗಾಗದಿರಲು ಹಾಗೂ ಮಹಾದೇವ ನಾಗಲು ಲಿಂಗಪೂಜೆ, ಜಂಗಮಭಕ್ತಿ ಮತ್ತು ಗುರುಲಿಂಗ ಜಂಗಮರ ತೀರ್ಥ ಪ್ರಸಾದದಲ್ಲಿ ಎಚ್ಚರವಿರಬೇಕು'. ಮುಂತಾಗಿ ಬೋಧಿಸಿ ಹೋಗು ಮನೆಗೆ, ನಿನ್ನ ಸಜ್ಜಿಕೆಯಲ್ಲಿ ಲಿಂಗವಿದೆ ಲಿಂಗಾರ್ಚನೆಯನ್ನು ಮಾಡು ಎಂದು ಅನುಗ್ರಹಿಸಿ ಕಳುಹಿಸಿಕೊಡುತ್ತಾರೆ. ಶ್ರೀಗುರುವಾಕ್ಯದಲ್ಲಿ ಶ್ರದ್ಧೆಯಿಟ್ಟ ಮಲ್ಲಿಸೆಟ್ಟಿ ಮನೆಗೆ ಹೋಗಿ ಲಿಂಗಾರ್ಚನೆಗೈಯ್ಯಲು ಕರಂಡವನ್ನು ತೆಗೆದಾಗ ಲಿಂಗವು ಪ್ರತ್ಯಕ್ಷವಾಗುತ್ತದೆ. ಹುಟ್ಟುಕುರುಡನಿಗೆ ಕಣ್ಣು ಬಂದಂತೆ, ಕಸವರ ಕಾಲಿಗೆ ತೊಡರಿದಂತೆ ಸಂತೋಷವಾಗುತ್ತದೆ. ಪೂಜೆಗೈದು ಆನಂದಪಟ್ಟು ಗುರುವನ್ನು ಕೊಂಡಾಡುತ್ತಾನೆ. ಭಕ್ತರೆಲ್ಲರೂ ಗುರುವನ್ನು ಭಜಿಸಿ ಕೃಪಾಶೀರ್ವಾದವನ್ನು ಪಡೆಯುತ್ತಾರೆ.

*ವಿಶೇಷ ವಿಚಾರ*

ಇಂದಿಗೂ ಶ್ರೀ ಸಿದ್ಧಗಂಗೆಯ ದಾಸೋಹಕ್ಕೆಂದು ಯಾರಾದರೂ ರೈತಭಕ್ತರು ಕಳುಹಿಸಿದ ಕುಂಬಳಕಾಯಿ, ಬದನೆಕಾಯಿ ಇತ್ಯಾದಿಗಳ ಮೇಲೆ ಆಸೆಪಟ್ಟು ಅನುಭವಿಸದೇ ಹಾಳಾದ ಅನೇಕ ಉದಾಹರಣೆಗಳಿವೆ. ಒಂದು ಸಣ್ಣ ಉದಾ : ಒಬ್ಬ ರೈತ ಭಕ್ತನು ತಾನು ಬೆಳೆದ ಕುಂಬಳಕಾಯಿಯೊಂದನ್ನು ಸಿದ್ಧಗಂಗೆ ಮಠದ ದಾಸೋಹಕ್ಕೆಂದು ಮಠದ ಅಧ್ಯಾಪಕನ ಕೈಲಿ ಕಳುಹಿಸಿದ್ದಾನೆ. ಸರಿ, ಅಧ್ಯಾಪಕ ಆ ಕುಂಬಳಕಾಯಿಯನ್ನು ತನ್ನ ಬಟ್ಟೆಬರೆಯ ಜೊತೆಯಲ್ಲಿಟ್ಟುಕೊಂಡು ರೈಲಿನಲ್ಲಿ ಹೊರಡುತ್ತಾನೆ. ಆತನಿಗೆ ಆ ಚೆನ್ನಾಗಿರುವ ಕುಂಬಳಕಾಯಿಯ ಮೇಲೆ ಆಸೆಯುಂಟಾಗುತ್ತದೆ. ಅದನ್ನು ಮಠಕ್ಕೆ ಕೊಡದೆ ಮನೆಗೆ ತೆಗೆದುಕೊಂಡು ಹೋಗುವುದೆಂದು ಮನಸ್ಸು ಮಾಡುತ್ತಾನೆ. ಅಷ್ಟು ಹೊತ್ತಿಗೆ ಕ್ಯಾತ್ಸಂದ್ರದ ರೈಲ್ವೆ ನಿಲ್ದಾಣ ಬರುತ್ತದೆ. ಕುಂಬಳಕಾಯಿಯನ್ನು ಕೈಲಿಹಿಡಿದುಕೊಂಡು ಬಟ್ಟೆಯ ಬ್ಯಾಗನ್ನು ಮರೆತು ಇಳಿದುಬಿಡುತ್ತಾನೆ. ಬ್ಯಾಗು ರೈಲಿನಲ್ಲಿಯೇ ಮುಂದೆ ಪ್ರಯಾಣಬೆಳೆಸುತ್ತದೆ. ಮನೆಗೆ ಬಂದ ಮೇಲೆ ಬ್ಯಾಗಿನ ನೆನಪಾಗುತ್ತೆ. ಬೆಲೆಬಾಳುವ ರೇಷ್ಮೆ ಬಟ್ಟೆಗಳು ಅದರಲ್ಲಿದ್ದವು. ದಾಸೋಹ ಸ್ವತ್ತಿನ ಮೇಲೆ ಆಳಿಯಾಸೆಯುಂಟಾದುದರಿಂದ ಕಳೆದುಕೊಳ್ಳುತ್ತಾನೆ. ಸೀದಾಮಠಕ್ಕೆ ಬಂದು ಗುರುಪಾದಮುಟ್ಟಿ ಸಂಗತಿ ಯನ್ನು ಹೇಳಿ ಪಶ್ಚಾತ್ತಾಪಪಟ್ಟು ಪುನೀತನಾಗುತ್ತಾನೆ. ಮತ್ತು ಬದುಕಿರುವ ತನಕ ದಾಸೋಹದ ಸ್ವತ್ತಿಗೆ ಆಸೆಪಟ್ಟರೆ ಆಗುವ ಅನುಭವವನ್ನು ಹೇಳುತ್ತಿದ್ದನು.

★

## ಶ್ರದ್ಧಾಂಜಲಿ



ಹ.ಬ. ಮಹಾದೇವಪ್ಪ

ಮಧುಗಿರಿಯ ಟಿ.ವಿ.ವಿ. ಪ್ರಥಮದರ್ಜೆ ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತಿ ಹೊಂದಿದ್ದ ಶ್ರೀ ಹ.ಬ. ಮಹಾದೇವಪ್ಪನವರು ದಿನಾಂಕ : ೧೫-೭-೨೦೦೫ರಂದು ಲಿಂಗೈಕ್ಯರಾದುದು ತಿಳಿದು ಅತೀವ ದುಃಖವಾಗಿದೆ. ಶ್ರೀಯುತರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ತುಮಕೂರು ಜಿಲ್ಲಾ ಘಟಕದ ಅಧ್ಯಕ್ಷರಾಗಿ, ತುಮಕೂರು ಜಿಲ್ಲಾ ಕನ್ನಡ ಶಕ್ತಿಕೇಂದ್ರದ ಅಧ್ಯಕ್ಷರಾಗಿ, ವಿವಿಧ ಕನ್ನಡಪರ ಸಾಂಸ್ಕೃತಿಕ ಸಂಘಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಿಸಿಕೊಂಡು ಸೇವೆ ಸಲ್ಲಿಸಿದ್ದರು.

ಶ್ರೀಯುತರು ಶರಣ ಧರ್ಮ, ಶರಣ ತತ್ತ್ವಗಳಲ್ಲಿ ಅಪಾರ ಪಾಂಡಿತ್ಯ ಪಡೆದಿದ್ದು, ಅನುಭಾವಿಗಳಾಗಿದ್ದರು. ತಾಲ್ಲೂಕು, ಹೋಬಳಿ ಹಾಗೂ ಹಳ್ಳಿ ಹಳ್ಳಿಗಳಲ್ಲಿ ನೀತಿ ನಿರೂಪಕರಾಗಿ, ಗ್ರಾಮೀಣ ಬದುಕಿಗೆ ಹೊಸ ಪರಿಕಲ್ಪನೆ ನೀಡಿ ಮಾರ್ಗದರ್ಶಕರಾಗಿದ್ದರು. ಶ್ರೀಯುತರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಗಳು, ಮನೆ ಮನೆಗಳಲ್ಲಿ ಸಾಹಿತ್ಯ ಗೋಷ್ಠಿಗಳು, ತತ್ತ್ವಚಿಂತನೆಗಳು ನಡೆಯುವುದಕ್ಕೆ ಚಾಲನೆ ನೀಡಿದ್ದರು.

ಶ್ರೀಯುತರು ಆದರ್ಶ ದಕ್ಷ ಶಿಕ್ಷಕರಾಗಿ, ಖ್ಯಾತ ಲೇಖಕರಾಗಿ, ಒಳ್ಳೆಯ ಭಾಷಣಕಾರರಾಗಿ, ಜಿಲ್ಲೆಯ ಸರ್ವರ ಪ್ರೀತಿ-ವಾತ್ಸಲ್ಯಗಳಿಗೆ ಪಾತ್ರರಾಗಿದ್ದರು. ಶ್ರೀಯುತರ ನಿಧನದಿಂದ ಜಿಲ್ಲೆಯ ಸಮರ್ಥ ಒಬ್ಬ ಸಾಂಸ್ಕೃತಿಕ ರಾಯಭಾರಿಯನ್ನು ಕಳೆದುಕೊಂಡಂತಾಗಿದೆ.

ಶ್ರೀಯುತರು ಶ್ರೀಮಠದೊಂದಿಗೆ ನಿಕಟ ಸಂಪರ್ಕವನ್ನು ಹೊಂದಿ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಸೇವೆ ಸಲ್ಲಿಸುತ್ತಿದ್ದರು. ದಯಾಮಯನಾದ ಭಗವಂತನು ಲಿಂಗೈಕ್ಯರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು, ಕುಟುಂಬವರ್ಗದವರಿಗೆ ಅವರ ಅಗಲಿಕೆಯಿಂದಾದ ದುಃಖವನ್ನು ಸಹಿಸುವ ಶಕ್ತಿಯನ್ನು ದಯಪಾಲಿಸಲೆಂದು 'ಸಿದ್ಧಗಂಗಾ' ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

## ''ಸಿದ್ಧಗಂಗಾ ವಿದ್ಯಾಸಂಸ್ಥೆಗಳ ನೌಕರರ ಸಮಾವೇಶ''

ದಿನಾಂಕ ೨೫.೫.೦೫ ರಂದು ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಪ್ರೌಢಶಾಲಾ ಮತ್ತು ಮಾಧ್ಯಮಿಕ ಶಾಲಾ ಮುಖ್ಯಸ್ಥರುಗಳ ಸಭೆಯನ್ನು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ದಿವ್ಯ ಸಾನಿಧ್ಯದಲ್ಲಿ ನಡೆಸಲಾಯಿತು. ಪ್ರಸಕ್ತಸಾಲಿನ ಆಡಳಿತಾತ್ಮಕ ಹಾಗೂ ಶೈಕ್ಷಣಿಕ ಪ್ರಗತಿ ಮತ್ತು S.S.L.C. ಪರೀಕ್ಷೆಯ ಫಲಿತಾಂಶಗಳನ್ನು ಕುರಿತು ಚರ್ಚಿಸಲಾಯಿತು. ಕಡಿಮೆ ಫಲಿತಾಂಶ ಬಂದಿರುವ ಶಾಲಾ ಮುಖ್ಯಸ್ಥರುಗಳಿಗೆ ಸೂಕ್ತ ನಿರ್ದೇಶನ ನೀಡಿ ಶಾಲೆಯ ಪ್ರಗತಿಯ ಬಗ್ಗೆ ಹೆಚ್ಚು ಗಮನ ನೀಡುವಂತೆ ಸೂಚಿಸಲಾಯಿತು.

ದಿನಾಂಕ ೦೪.೦೬.೦೫ ರಂದು ಸಿದ್ಧಗಂಗಾ ವಿದ್ಯಾ ಸಂಸ್ಥೆಯ ನೌಕರರ ಸಮಾವೇಶ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ದಿವ್ಯ ನೇತೃತ್ವದಲ್ಲಿ ನಡೆಯಿತು. ಇದರಲ್ಲಿ ಬೋಧಕರು, ಬೋಧಕೇತರರು ಸೇರಿ ಸುಮಾರು ನಾಲ್ಕು ಸಾವಿರಮಂದಿ ಭಾಗವಹಿಸಿದ್ದರು.

ಪೂಜ್ಯ ಶ್ರೀ ಶ್ರೀಗಳವರು ತಮ್ಮ ಆಶೀರ್ವಾದದ ಮಂತ್ರ ನುಡಿಗಳಲ್ಲಿ ತಮ್ಮ ಮನದಾಳದ ಸದಾಶಯವನ್ನು ಈ ರೀತಿಯಾಗಿ ವ್ಯಕ್ತಪಡಿಸಿದರು. ಇದು ವಿಜ್ಞಾನ-ತಂತ್ರಜ್ಞಾನ ಯುಗ, ಮಾನವನಿಗೆ ಅಸಾಧ್ಯವಾದುದೇ ಇಲ್ಲ ಎನ್ನುವ ಘೋಷಣೆ, ಅಲೆಕ್ಸಾರ್ ಎಂಬ ಮಹಾವೈದ್ಯ-ತತ್ವಶಾಸ್ತ್ರಜ್ಞ ಒಂದೆಡೆ ಹೀಗೆ-ಅಪ್ಪಣೆಕೊಡಿಸಿದ್ದಾನೆ'' ಜಗತ್ತು ಭೌತಿಕವಾಗಿ ಅಗಾಧ ಪ್ರಗತಿ ಸಾಧಿಸಿದೆ. ಆದರೆ ಆಳವಾಗಿ ನೋಡಿದಾಗ ನಮ್ಮ ಸಂಸ್ಕೃತಿ ಅವನತಿಯಾಗುತ್ತಿದೆ''. ಎಂಬುದು ಆತನನುಡಿ. ನೀವು ಟಿ.ವಿ. ಮುಂದೆ ಹೆಚ್ಚು ಕಾಲ ಹರಣ ಮಾಡುತ್ತಿದ್ದೀರಿ, ಅದರ ಉಪಯೋಗ ಎಷ್ಟು ಜನ ಪಡೆದುಕೊಂಡಿದ್ದೀರಿ, ಅದು ಜೀವನಕ್ಕೆ ಮಾರಕವಾಗಿ ಅನೇಕರು ನಾಶವಾಗುತ್ತಿದ್ದಾರೆ.

ಎರಡು ಮಹಾಯುದ್ಧಗಳು ಜಗತ್ತಿನಲ್ಲಿ ಭಯಾನಕವಾದ ಹಾನಿಮಾಡಿದವು. ಆದರೆ ಇಂದು ಹಳ್ಳಿ-ಹಳ್ಳಿಗಳಲ್ಲಿ ಎಲ್ಲಾ ರಂಗದಲ್ಲಿ ಶೀತಲ ಸಮರಗಳು ನಡೆಯುತ್ತಿವೆ. ಮನುಷ್ಯ-ಮನುಷ್ಯರ ನಡುವೆ ದ್ವೇಷ, ಅಸೂಯೆ ಮನೆ ಮಾಡಿವೆ. ಭರತಖಂಡ ವಿಶ್ವಶಾಂತಿಗೆ ಅಪಾರಕೊಡುಗೆ ನೀಡಿದೆ. ಇಂದಿಗೂ ಆ ಭಾರ ನಾವೇ ಹೊರಬೇಕಾಗಿದೆ. ಈ ದೆಶೆಯಲ್ಲಿ ಶಿಕ್ಷಕರಾದ ನಿಮ್ಮ ಜವಾಬ್ದಾರಿ ಸೀಮಿತವಾಗಿಲ್ಲ, ಅದು ವ್ಯಾಪಕವಾಗಿದೆ.

ಭಾರತೀಯರು ''ಆಚಾರ್ಯದೇವೋಭವ, ಮಾತೃದೇವೋಭವ'' ಎಂದು ಗೌರವಿಸಿ ಉತ್ತಮ ಸ್ಥಾನ ನೀಡಿದ್ದಾರೆ. ಜಗತ್ತಿನ ಉದ್ಧಾರವಾಗಬೇಕಾದರೆ, ಮನುಕುಲದ ಉದ್ಧಾರವಾಗಬೇಕಾದರೆ, ವಿಶ್ವಶಾಂತಿಯಾಗಬೇಕಾದರೆ, ಆಚಾರ್ಯ ಮತ್ತು ತಾಯಿಯಿಂದ ಮಾತ್ರ ಸಾಧ್ಯ. ಆಚಾರ್ಯ ಘನಪಾಂಡಿತ್ಯವುಳ್ಳವನಾಗಿದ್ದ, ಸರಳ ಜೀವನದ ಪ್ರತೀಕ, ತ್ಯಾಗ, ಸೇವೆಯೆ ಆತನ ಉಸಿರಾಗಿತ್ತು. ಇದರ ಬಗ್ಗೆ ಪ್ರತಿಯೊಬ್ಬ ಶಿಕ್ಷಕರು ಆತ್ಮಾವಲೋಕನ ಮಾಡಿಕೊಳ್ಳಬೇಕು. ಒಂದು ಕಾಲದಲ್ಲಿ ಶಿಕ್ಷಕ ಹುದ್ದೆ ಪ್ರಯೋಜನವಿಲ್ಲದ್ದು ಎಂಬ ಭಾವನೆ ಇತ್ತು. ಆದರೆ ಇಂದು ಅದು ಬದಲಾಗಿದೆ. ಶಿಕ್ಷಕ ಮಕ್ಕಳಿಗೆ ಸ್ನೇಹಿತನಾಗಿ, ಮಾರ್ಗದರ್ಶಿಯಾಗಿ, ತತ್ವಜ್ಞಾನಿಯಂತೆ ಇರಬೇಕು ಎಂಬುದು ತಜ್ಞರ ಅಭಿಪ್ರಾಯ. ನಿಮ್ಮದು ರಾಷ್ಟ್ರ ನಿರ್ಮಾಣ ಮಾಡುವ ಖಾತೆ. ಸರ್ಕಾರ ಇದಕ್ಕೆ ಹೆಚ್ಚು ಪ್ರೋತ್ಸಾಹ ಕೊಡಬೇಕು. ನಿಮ್ಮಲ್ಲಿ ಪ್ರಭುತ್ವ ಬೇಕು, ಯಾವುದೇ ಸಂಶಯವಿರಬಾರದು, ಇದಮಿತ್ಥಂ ಎನ್ನುವಂತಿರಬೇಕು.

ಉಪಾಧ್ಯಾಯನಾದ ಮೇಲೆ ನಿಜವಾದ ವಿದ್ಯಾರ್ಥಿಯಾಗಬೇಕು, ಅಧ್ಯಯನಶೀಲನಾಗಬೇಕು. ವೈಯಕ್ತಿಕ ಜೀವನ ಶುದ್ಧವಾಗಿರಬೇಕು, ಇತರರಿಗೆ ಆದರ್ಶವಾಗಿರಬೇಕು. ದುಶ್ಚಟಗಳಿಂದ ದೂರವಿರಿ, ಇವತ್ತೇ ಪ್ರತಿಜ್ಞೆ ಮಾಡಿ. ಅಂಥವರು ಈ ವೃತ್ತಿಗೆ ಯೋಗ್ಯರಲ್ಲ. ಹಳ್ಳಿಯ ವಾತಾವರಣದ ಮಕ್ಕಳನ್ನು ನೀವು ಚೆನ್ನಾಗಿ ಬೆಳೆಸಬೇಕು, ಭಾವನಾತ್ಮಕ ಗುಣ ಉಳ್ಳವರಾಗಬೇಕು. ನಿಮ್ಮ ಮಕ್ಕಳಂತೆ ಆ ಮಕ್ಕಳನ್ನು ಕಾಣಬೇಕು. ಸಮಾಜದಲ್ಲಿಯ ಭ್ರಷ್ಟಾಚಾರವನ್ನು ತಡೆಯುವ ಕಡೆಗೆ ಗಮನ ಹರಿಸಬೇಕು. ಅದೇ ಉತ್ತಮ ಪೂಜೆ. ನೀವು ಮಕ್ಕಳ ಜೊತೆ ಇರುವುದೇ ಜೀವನದ ರಸನಿಮಿಷ. ಸಮಯ ಪ್ರಜ್ಞೆಯನ್ನು ಅರಿತು ಉತ್ತಮ ಫಲಿತಾಂಶ ತನ್ನಿ. ಮಕ್ಕಳಿಗೆ ಅನ್ಯಾಯ ಮಾಡಿದವರನ್ನು ಭಗವಂತ ಕ್ಷಮಿಸುವುದಿಲ್ಲ.

ಕಳೆದ ಸಮಾರಂಭದಲ್ಲಿ ನೀವು ಸಲ್ಲಿಸಿದ ಸೇವೆಯಿಂದ ರಾಷ್ಟ್ರ ಮೆಚ್ಚುವಂತೆ ಕಾರ್ಯಕ್ರಮಗಳು ನಡೆದವು. ಎಲ್ಲರ ಮೆಚ್ಚುಗೆಗೆ





ಪಾತ್ರವಾಯಿತು. ಮುಂದೆಯು ಇಂತಹ ಸೇವೆಯನ್ನು ಸಂಸ್ಥೆ ನಿರೀಕ್ಷಿಸುತ್ತದೆ ಎಂದು ತಿಳಿಸಿದರು.

ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಆಶೀರ್ವಚನ ನೀಡುತ್ತಾ, ನಿಮ್ಮಲ್ಲಿ ಹೆಚ್ಚು ಉಪಾಧ್ಯಾಯರು ಗ್ರಾಮೀಣ ಪ್ರದೇಶದಲ್ಲಿ ಸೇವೆ ಸಲ್ಲಿಸುತ್ತಿರುವವರು. ಮಹಾತ್ಮ ಗಾಂಧೀಜಿಯವರ ಹಾಗೂ ಪೂಜ್ಯ ಗುರುಗಳ ಸದಾಶಯದಂತೆ ಗ್ರಾಮೀಣ ಮಕ್ಕಳ ಅಜ್ಞಾನ ತೊಲಗಿಸಿ, ಅವರನ್ನು ಸನ್ಮಾರ್ಗದತ್ತ ನಡೆಸುವ ಸೇವಾ ಮನೋಭಾವ ನಿಮ್ಮದಾಗಬೇಕು, ನಿಮ್ಮ ವೃತ್ತಿಯನ್ನು ನೀವು ತೀವ್ರ ಪ್ರೀತಿಸಬೇಕು. ಕೆಲವರಲ್ಲಿ ಪ್ರವೃತ್ತಿಯೆ ಜಾಸ್ತಿಯಾಗಿದೆ. ಈ ವೃತ್ತಿ ನನ್ನ ಆಯ್ಕೆ ಎನ್ನುವ ಭಾವನೆ ಬರಬೇಕು. ಶಿಕ್ಷಕರಾದವರಿಗೆ ಎರಡೇ ಕಣ್ಣು, ಅಧ್ಯಯನ-ಅಧ್ಯಾಪನ. ನೀವು ಬೆಳೆದಂತೆಲ್ಲಾ ಜ್ಞಾನ ಹೆಚ್ಚು ಹೆಚ್ಚು ವಿಕಾಸವಾಗುತ್ತ ಹೋಗಬೇಕು. ಜೊತೆಗೆ ಬದಲಾಗುತ್ತಿರುವ ಈ ಜಗತ್ತಿಗೆ ಅನುಗುಣವಾಗಿ ಸಾಮಾನ್ಯ ಜ್ಞಾನವನ್ನು ಬೆಳಸಿಕೊಳ್ಳಬೇಕು. ಸಂಸ್ಥೆ ಪೂಜ್ಯರ ತ್ಯಾಗ- ಶ್ರಮದ ಫಲದಿಂದ ಒಳ್ಳೆಯ ಹೆಸರನ್ನು ಪಡೆದಿದೆ. ನೀವೆಲ್ಲಾ ಪೂಜ್ಯರ ಅಮೃತ ಮಹೋತ್ಸವ ಹಾಗೂ ೯೮ನೇ ವರ್ಷದ ಗುರುವಂದನಾ ಕಾರ್ಯಕ್ರಮದಲ್ಲಿ ಅವಿಸ್ಮರಣೀಯ ಸೇವೆ ಸಲ್ಲಿಸಿದಿರಿ. ಸಂಸ್ಥೆ ಈ ನಿಮ್ಮ ಸೇವೆಯನ್ನು ಯಾವತ್ತೂ ಸ್ಮರಿಸುತ್ತದೆ. ತ್ಯಾಗದಿಂದ ಮಾತ್ರ ಅಮೃತತ್ವ ದೊರಕುವುದು. ಉತ್ತಮ ಶಿಕ್ಷಕರಾಗಿ ಸಂಸ್ಥೆಗೆ ಕೀರ್ತಿ ತರಬೇಕೆಂದು ಆಶಿಸಿದರು.

ಶಿಕ್ಷಣ ತಜ್ಞರಾದ ಸನ್ಮಾನ್ಯ ಶ್ರೀ ಜಿ.ಪಿ. ಬಸವರಾಜು ಅವರು ಮಾತನಾಡುತ್ತಾ, ಶಿಕ್ಷಕ ತನ್ನನ್ನು ತಾನು ಸದಾ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಬೇಕು. ಅಂತರಾವಲೋಕನ ಮಾಡಿಕೊಂಡು ಊರ್ಧ್ವಗಾಮಿಗಳಾಗಿ ಬೆಳೆಯಬೇಕು. ನಿಂದನೆಗಳನ್ನು ಧನಾತ್ಮಕ ಭಾವದಿಂದ ಸ್ವೀಕರಿಸಿ.

ಹಿಂದೆ ಶಿಕ್ಷಣ ಕೇವಲ ಒಂದು ಚಟುವಟಿಕೆಯಾಗಿ ಜ್ಞಾನ ಪ್ರಸಾರವೆ ಅದರ ಗುರಿಯಾಗಿತ್ತು. ಇಂದು ಶಿಕ್ಷಣ ಒಂದು ಪ್ರಕ್ರಿಯೆ, ಮಗುವಿನ ಸರ್ವತೋಮುಖ ಬೆಳವಣಿಗೆಯೆ ಶಿಕ್ಷಣದ ಗುರಿ, ಸರ್ವತೋಮುಖ ಬೆಳವಣಿಗೆಯಾದ್ದರಿಂದ ಗುರಿಗಳು ಹಲವು. ಇದು ಮೂರು ಆಯಾಮಗಳನ್ನು ಒಳಗೊಂಡಿದೆ. ''ಬೆಂಜಮಿನ್ ಬ್ಲೂಮ್''ನು ಮೂರು ವಲಯಗಳನ್ನಾಗಿ ವಿಂಗಡಿಸಿದ್ದಾನೆ. ಅವು ಕ್ರಮವಾಗಿ ಜ್ಞಾನಾತ್ಮಕ ವಲಯ, ಭಾವನಾತ್ಮಕ ವಲಯ, ಕೌಶಲ್ಯಗಳ ವಲಯ, ಈ ಮೂರು ವಲಯಗಳು ಪರಿಪೂರ್ಣವಾದಾಗ ವಿದ್ಯಾರ್ಥಿಯ ಪೂರ್ಣ ಬೆಳವಣಿಗೆಯಾಗುತ್ತದೆ.

ಇಂದು ಮೌಲ್ಯಗಳು ಅಧಃ ಪತನ ಹೊಂದಿವೆ. ಶಿಕ್ಷಕರು ಮಕ್ಕಳಲ್ಲಿ ಮೌಲ್ಯಗಳನ್ನು ಬೆಳೆಸಬೇಕಾಗಿದೆ. ಮೌಲ್ಯಗಳ ಬೆಳವಣಿಗೆಯೆಂದರೆ, ವ್ಯಕ್ತಿ-ಸಮಾಜ ತಪ್ಪುವಂತೆ ನಡೆದು ಕೊಳ್ಳುವುದು.

"Infant animal is converted into a good individual'' (ಮಗುವನ್ನು ಪರಿಪೂರ್ಣ ವ್ಯಕ್ತಿಯನ್ನಾಗಿ ರೂಪಿಸುವುದೇ ಶಿಕ್ಷಣ)

ಹಿಂದಿನ ಶಿಕ್ಷಣದಲ್ಲಿ ಶಿಕ್ಷಕನೆ ಸರ್ವಸ್ವವಾಗಿದ್ದ, ಇಂದು ಶಿಕ್ಷಕನ ಸ್ಥಾನವನ್ನು ಅನೇಕ ಮಾಧ್ಯಮಗಳು ಆಕ್ರಮಿಸಿಕೊಂಡಿವೆ. ಆದರೂ ಇಂದಿನ ಶಿಕ್ಷಣ ಪದ್ಧತಿಯಲ್ಲಿ ಪರಿಣಾಮಕಾರಿ ಬೋಧನೆಗೆ ಶಿಕ್ಷಕ ಅನಿವಾರ್ಯ, ಬೋಧನೆ ಫಲಪ್ರದವಾಗಲು ದಿನದ ಯೋಜನೆ, ವಾರದ ಯೋಜನೆ- ವಾರ್ಷಿಕ ಯೋಜನೆಗಳನ್ನು ರೂಪಿಸಿಕೊಳ್ಳಬೇಕು. ಪರಿಣಾಮಕಾರಿ ಬೋಧನೆ ಮೂರು ಹಂತಗಳನ್ನು ಒಳಗೊಂಡಿದೆ. ಅವು ಯೋಜನೆ ತಯಾರಿಕೆ ಹಾಗೂ ಪ್ರದರ್ಶನ. ಶಿಕ್ಷಕ ಮೊದಲು ಕಲಿಕೆಯ ವಿಷಯ ಆಯ್ದುಕೊಂಡು ಪ್ರತಿ ಅವಧಿಗೂ ಬೋಧನಾಂಶಗಳನ್ನು ಗುರ್ತಿಸಿಕೊಂಡು ಹಲವು ಬಾರಿ ಅಧ್ಯಯನ ಮಾಡಿಕೊಂಡು ತಯಾರಾಗಬೇಕು. ಪಾಠ ಪ್ರದರ್ಶನ ಹಂತದಲ್ಲಿ ಪರಿಕಲ್ಪನೆಗಳು ಸ್ಪಷ್ಟವಾಗಿ ಅರ್ಥವಾಗಬೇಕಾದರೆ, ಸೂಕ್ತ ಉದಾಹರಣೆ, ದೃಷ್ಟಾಂತ, ಹೋಲಿಕೆಗಳನ್ನು ನೀಡಬೇಕು, ಮಕ್ಕಳೆಲ್ಲರೂ ಭಾಗಿಯಾಗುವಂತೆ ನೋಡಿಕೊಳ್ಳಬೇಕು. ಇಂಗ್ಲೀಷ್ ಬೋಧನೆಯಲ್ಲಿ ೨-೩ ಪದಗಳನ್ನು ಸೇರಿಸಿ ಚಿಕ್ಕ ಚಿಕ್ಕ ಸರಳ ವಾಕ್ಯಮಾಡಿ ಬೋಧಿಸಬೇಕು. ಶಿಕ್ಷಕರು ಬಳಸುವ ಭಾಷೆ, ಸರಳ, ಸ್ಪಷ್ಟ, ಆಡುಭಾಷೆಯಾಗಿ ನೇರವಾಗಿ ತಲುಪುವಂತಿರಬೇಕು.

ಮೌಲ್ಯಮಾಪನ ಮಾಡಬೇಕಾದರೆ ವಿದ್ಯಾರ್ಥಿಗಳನ್ನು Under Estimate ಮಾಡಬಾರದು. ನಂಬಬೇಕು, ಬೇರೆ ಮಗುವಿನೊಂದಿಗೆ ಹೋಲಿಸಬಾರದು, ಪ್ರತಿಯೊಂದು ಮಗುವಿಗೂ ತನ್ನದೇ ಆದ ಸಾಮರ್ಥ್ಯವಿರುತ್ತದೆ. ಇವೆಲ್ಲವನ್ನು ಗಮನಿಸಿ ಮೌಲ್ಯಮಾಪನ ಮಾಡಬೇಕು. ಇಂದು ಶಾಲೆಗಳಲ್ಲಿ ಕಲಿಕೆಗೆ ವಿದ್ಯಾರ್ಥಿಗಳು, ಬೋಧಿಸಲು ಶಿಕ್ಷಕರು, ಕಲಿಯಲು ವಿಷಯ ಈ ಎಲ್ಲಾ ಸಂಪನ್ಮೂಲವಿದ್ದರು ಕಲಿಕೆ ಪರಿಣಾಮಕಾರಿಯಾಗುತ್ತಿಲ್ಲ. ಕಾರಣ ಕಲಿಕೆಗೆ ಉತ್ತೇಜನ ನೀಡಬೇಕಾದ ಸನ್ನಿವೇಶ ಶಾಲೆಗಳಲ್ಲಿ ಇಲ್ಲ.

ಇದನ್ನು ಸೃಷ್ಟಿಸುವ ಜವಾಬ್ದಾರಿ ಶಿಕ್ಷಕನದೆ, ಆದ್ದರಿಂದ ಶಿಕ್ಷಕರಾದವರು ಇಂದಿನ ವ್ಯವಸ್ಥೆಯನ್ನಾಗಲಿ, ಪೋಷಕರನ್ನಾಗಲಿ ದೂರದೆ ಅಂತರಾವಲೋಕನ ಮಾಡಿಕೊಂಡು ಸಕಲ ಸಿದ್ಧತೆಯೊಂದಿಗೆ ಬೋಧಿಸಬೇಕು. ಎಲ್ಲಾ ವಿದ್ಯಾರ್ಥಿಗಳು ಉತ್ತೀರ್ಣರಾಗುವಂತೆ ಪ್ರಯತ್ನಿಸಬೇಕು. ಎಂದು ತಿಳಿಸಿದರು.

ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಶ್ರೀ ಹೆಚ್. ವೀರಭದ್ರಯ್ಯನವರು ಮಾತನಾಡಿ, ನಾವು ಸಂಸ್ಥೆಯನ್ನು ಪ್ರೀತಿಸುವ ಮಕ್ಕಳನ್ನು ಬೆಳಸಬೇಕು. ಅಲಂಕಾರಿಕ ಭಾಷೆ ಬಳಸದೆ ಸರಳ ರೀತಿಯಲ್ಲಿ ಅರ್ಥವಾಗುವಂತೆ ಮಕ್ಕಳಿಗೆ ತಿಳಿಸಿ ಬೆಳಸಬೇಕು. ವಿದ್ಯಾರ್ಥಿಗಳೇ ನಿಜವಾದ ಮೌಲ್ಯಮಾಪಕರು, ನಾವು ಎರಡು ಕಣ್ಣಿನಿಂದ ನೋಡುತ್ತಿದ್ದರೆ, ನಮ್ಮನ್ನು ನೂರಾರು ಕಣ್ಣುಗಳು ವೀಕ್ಷಿಸುತ್ತವೆ. ಆದ್ದರಿಂದ ನಮ್ಮ ನಡೆ-ನುಡಿ ಶುದ್ಧವಾಗಿರಬೇಕು ಎಂದು ತಿಳಿಸಿದರು.

ನಮ್ಮ ವಿದ್ಯಾಸಂಸ್ಥೆಯ ಕಾರ್ಯಕಾರಿ ಮಂಡಳಿಯ ಸದಸ್ಯರಲ್ಲಿ ಒಬ್ಬರಾದ ವಾಣಿಜ್ಯೋದ್ಯಮಿ ಶ್ರೀ ಎನ್.ಆರ್. ಜಗದೀಶಾರಾಧ್ಯರು ಮಾತನಾಡಿ, ಹಳ್ಳಿಗಾಡಿನ ಮಕ್ಕಳ ಬಗ್ಗೆ ತಾವು ಹೆಚ್ಚು ಗಮನ ಹರಿಸಬೇಕು, ಪೂಜ್ಯರು ೯೮ನೇ ಇಳಿ ವಯಸ್ಸಿನಲ್ಲಿಯೂ ದಿನದಲ್ಲಿ ಇಪ್ಪತ್ತೊಂದು ಗಂಟೆ ದುಡಿಯುತ್ತಿದ್ದಾರೆ. ನಾವು ಸ್ವಲ್ಪ ಕೈಜೋಡಿಸೋಣ. ವ್ಯಾಪಾರ ಅನ್ನುವುದು ಹುಲಿಯಮೇಲೆ ಸವಾರಿ ಮಾಡಿದ ಹಾಗೆ ಸ್ವಲ್ಪ ಅದಕ್ಕೆ ಹಸಿವಾದರು ಸವಾರಿಯವನನ್ನೇ ತಿಂದು ಹಾಕಿ ಬಿಡುತ್ತದೆ. ಇದನ್ನು ನಿಮ್ಮ ಬದುಕಿಗೂ ಅನ್ವಯಿಸಬಹುದು. ನೀವು ಎಷ್ಟೇ ಬುದ್ಧಿವಂತರಾದರು ನೀವು ಮತ್ತೊಬ್ಬರೊಂದಿಗೆ ಚರ್ಚಿಸಿ ವಿಷಯವನ್ನು ಸ್ಪಷ್ಟವಾಗಿ ಅರಿಯಬೇಕು. ವೈದ್ಯನಾದವನು ಎಷ್ಟೇ ಪರಿಣಿತನಾಗಿದ್ದರು ಪರದೇಶದಲ್ಲಿರುವ ಮತ್ತೊಬ್ಬ ತಜ್ಞ ವೈದ್ಯನನ್ನು ಸಂಪರ್ಕಿಸಿ ಕಾರ್ಯ ನಿರ್ವಹಿಸುವಂತೆ ಶಿಕ್ಷಕರಾದ ನೀವು ಅನುಸರಿಸಬೇಕು. ಇಂದು ಶಿಕ್ಷಣ ಕ್ಷೇತ್ರದಲ್ಲಿ ತೀವ್ರ ಸ್ಪರ್ಧೆ ಇದೆ. ನೀವು ನಿಮ್ಮ ಅಸ್ತಿತ್ವ ಉಳಿಸಿಕೊಳ್ಳಬೇಕಾದರೆ ಹೆಚ್ಚು ಕಷ್ಟಪಡಬೇಕು ಎಂದು ಆಶಿಸಿದರು.

ಪ್ರಾರಂಭದಲ್ಲಿ ಪ್ರಸ್ತಾವಿಕ ನುಡಿಗಳನ್ನು ಆಡಿದ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಎನ್. ನಂಜುಂಡಪ್ಪನವರು ಮಾತನಾಡಿ ನಮ್ಮ ವಿದ್ಯಾ ಸಂಸ್ಥೆ ೧೯೪೭ರಲ್ಲಿ ನಲವತ್ತು ವಿದ್ಯಾರ್ಥಿಗಳಿಂದ ಪ್ರಾರಂಭವಾಗಿ, ಇಂದು ೧೨೮ ವಿದ್ಯಾಸಂಸ್ಥೆಗಳನ್ನೊಳಗೊಂಡು ಶ್ರೀ ಮಠದಲ್ಲಿ ಎಂಟು ಸಾವಿರ ಅನಾಥ ಬಡಮಕ್ಕಳು ಜಾತಿ, ಮತ, ಭೇದವಿಲ್ಲದೆ ಅಧ್ಯಯನದಲ್ಲಿ ನಿರತರಾಗಿದ್ದಾರೆ. ಶ್ರೀ ಮಠದ ಪ್ರಗತಿಯ ಜೊತೆಯಲ್ಲಿ ವಿದ್ಯಾ ಪ್ರಸಾರವು ಉದಿತೋದಿತವಾಗಿ ಹೆಚ್ಚಾಗತೊಡಗಿದೆ. ಸಿಬ್ಬಂದಿವರ್ಗ ಆತ್ಮಾವಲೋಕನ ಮಾಡಿಕೊಳ್ಳಬೇಕು. ಶೇ. ೯೦ರಷ್ಟು ಅರ್ಪಣಾ ಮನೋಭಾವದಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ. ಉಳಿದ ೧೦ ಮಂದಿ ಜೊತೆಗೂಡಿ ನಡೆಯಬೇಕು. ಐ.ಎಸ್.ಓ. ಇಂದ ಮಾನ್ಯತೆ ಪಡೆಯಲು ಪ್ರಯತ್ನಿಸಲಾಗುತ್ತಿದೆ. ಅದಕ್ಕೆ ಸಿದ್ಧತೆ ಮಾಡಿಕೊಳ್ಳಬೇಕು ಎಂದು ಸದಾಶಯ ನುಡಿಗಳನ್ನಾಡಿದರು.

ಪ್ರಾರಂಭದಲ್ಲಿ ಕುಮಾರಿ ಸುನೀತಾ ಸಂಗಡಿಗರು ಪ್ರಾರ್ಥನೆ ಸಲ್ಲಿಸಿದರು, ವಿದ್ಯಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಸ್ವಾಗತಿಸಿದರು, ಶ್ರೀ ಎಸ್. ಶಿವಕುಮಾರ್ ವಂದನೆ ಸಲ್ಲಿಸಿದರು.

### *ವಿದ್ಯಾರ್ಥಿಗಳ ದಾಖಲಾತಿ*

೨೦೦೫-೦೬ನೇ ಸಾಲಿಗೆ ಶ್ರೀ ಮಠಕ್ಕೆ ತಮ್ಮ ಭವಿಷ್ಯವನ್ನು ಅರಳಿಸಿಕೊಳ್ಳಲು ಸಾವಿರಾರು ವಿದ್ಯಾರ್ಥಿಗಳು ಬಂದು ಬೀಡುಬಿಟ್ಟಿದ್ದಾರೆ, ಹೊಸದಾಗಿ ಸೇರುವ ವಿದ್ಯಾರ್ಥಿಗಳನ್ನು ಮತ್ತು ಅವರ ಪೋಷಕರನ್ನು ಸ್ವತಃ ಪೂಜ್ಯರೆ ಸಂದರ್ಶನ ಮಾಡಿ, ಅವರ ಕಷ್ಟದುಃಖಗಳನ್ನು ಆಲಿಸಿ ನಂತರ ಶ್ರೀ ಮಠಕ್ಕೆ ಸೇರಿಸಿಕೊಳ್ಳುತ್ತಾರೆ. ಭವ್ಯ ಭಾರತದ ನಿರ್ಮಾತೃಗಳನ್ನು ಸೃಷ್ಟಿಸುವ ಜ್ಞಾನ ಕಮ್ಮಟವಾಗಿ ಶ್ರೀ ಕ್ಷೇತ್ರ ಸ್ವಾಮೀಜಿಯವರ ಸಾನಿಧ್ಯದಲ್ಲಿ ಕಂಗೊಳಿಸುತ್ತಿದೆ. ಆ ಬೆಳಕಿನಲ್ಲಿ ಮಕ್ಕಳು ಹಾಡುತ್ತ, ನಗುತ್ತಾ, ವಿದ್ಯಾಭ್ಯಾಸ ಮಾಡುತ್ತಿದ್ದಾರೆ.

ವರದಿ : ಡಿ.ಎನ್. ನಾಗರಾಜು

**ಶ್ರೀವಾಣಿ**

ಕುಡಿವ ನೀರು, ಉಸಿರಾಡುವ (ಗಾಳಿ, ಉಣ್ಣುವ ಗಂಜಿ, ನಿಲ್ಲುವ ನೆಲಕ್ಕೆ ಹುಟ್ಟಿದ ಪ್ರತಿಯೊಂದು ಜೀವಿಗೂ ಹಕ್ಕಿದೆ. ಅವು ಎಲ್ಲಾ ಜೀವಿಗಳಿಗೂ ಸಲ್ಲಲೇಬೇಕು. ಅದಕ್ಕಾಗಿ ಹೋರಾಟ ನಡೆದರೂ ಚಿಂತೆಯಿಲ್ಲ. ರಕ್ತ ಹರಿದರೂ ಪರವಾಗಿಲ್ಲ. ಪ್ರಾಣಾರ್ಪಣೆಯಾದರೂ ನಷ್ಟವಿಲ್ಲ. ಅವು ಭಗವಂತನ ಸೃಷ್ಟಿಯಾಗಿದ್ದು ಎಲ್ಲರಿಗೂ ಸಮಪಾಲು ಸಲ್ಲಲೇಬೇಕು. ಈ ಹಕ್ಕಿನ ಸಮರ್ಪಕವಾದ ಹಂಚಿಕೆಗಾಗಿಯೇ ನಮ್ಮ ಹಿಂದಿನ ವೀರರು, ಸಂತರು, ಮಹಾತ್ಮರು ಸತ್ಯದ ಕತ್ತಿ ಎತ್ತಿ ಧರ್ಮವನ್ನು ಜಗತ್ತಿನಲ್ಲಿ ಬಿತ್ತುತ್ತಾ ಬಂದರು. ವ್ಯಕ್ತಿಯ ಸುಖದಲ್ಲಿ ಸಮಾಜದ ಶಾಂತಿ ಪ್ರಗತಿಯನ್ನು ಕಂಡರು. ಸಮಾಜದ ಭದ್ರತೆಯಲ್ಲಿ ವ್ಯಕ್ತಿಯ ಕರ್ತವ್ಯವನ್ನು ಬೋಧಿಸಿದರು.





## ಸರಳ ವಿವಾಹಕ್ಕೆ 'ವಚನ ಮಾಂಗಲ್ಯ'ದ ಮುನ್ನುಡಿ



ತುಮಕೂರು ತಾಲ್ಲೂಕು ದೊಡ್ಡಸಾರಂಗಿ ಗ್ರಾಮದ ಬಸವ ಕುಟೀರದಲ್ಲಿ ನಡೆದ ವಚನ ಮಾಂಗಲ್ಯ ಸರಳ ವಿವಾಹದಲ್ಲಿ ಗೋಪಿ ಮತ್ತು ಭ್ರಮರಾ ಸತಿಪತಿಗಳಾದರು. ಚಿತ್ರದಲ್ಲಿ : ಸಿದ್ಧಗಂಗಾ ಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಬೆಟ್ಟದಹಳ್ಳಿ ಮಠದ ಚಂದ್ರಶೇಖರ ಸ್ವಾಮೀಜಿಗಳು, ಅಮೃತ ವೀರಭದ್ರಯ್ಯ, ಶ್ರೀ ಹೆಚ್.ವಿ. ವೀರಭದ್ರಯ್ಯ, ಶ್ರೀ ಕುಮಾರ ನಿಜಗುಣರು ಹಾಗೂ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಕಾರ್ಯಕ್ರಮದ ಸಾನ್ನಿಧ್ಯ ವಹಿಸಿದ್ದರು. ನೂತನ ದಂಪತಿಗಳ ಪೋಷಕರನ್ನು ಕಾಣಬಹುದು.

ದಿನಾಂಕ ೦೪.೦೬.೦೫ ಸೋಮವಾರದಂದು ತುಮಕೂರು ಜಿಲ್ಲೆಯ ಗೂಳೂರು ಹೋಬಳಿಯ ದೊಡ್ಡಸಾರಂಗಿಯಲ್ಲಿ ಸಂಭ್ರಮದ ವಾತಾವರಣ. ಸರಳ ರೀತಿಯ ವಚನ ಮಾಂಗಲ್ಯ ೨೦ನೇ ಶತಮಾನದಲ್ಲಿ ಶರಣ ಪಥವನ್ನು ಅನುಸರಿಸಿ ಜೀವನ ಸಾಗಿಸಿದ ದೊಡ್ಡ ಸಾರಂಗಿ ದೊ.ಬ. ಮೃತ್ಯುಂಜಯಪ್ಪ ಮತ್ತು ಶ್ರೀಮತಿ ಗಿರಿಜಾಶರಣ ದಂಪತಿಗಳ ಪುತ್ರಿ ಚಿ|| ಸೌ|| ಭ್ರಮರ ಹಾಗೂ ಚೇಳೂರಿನ ಶ್ರೀ ನರಸಪ್ಪ ಮತ್ತು ಶ್ರೀಮತಿ ಹನುಮಕ್ಕ ಶರಣದಂಪತಿಗಳ ಪುತ್ರ ಸಿ.ಎನ್. ಗೋಪಿರವರ ವಿವಾಹ ಜರುಗಿತು. ವಿವಾಹ ಸಂಭ್ರಮ ಒಂದು ಹೊಸ ವಾತಾವರಣವನ್ನು ಸೃಷ್ಟಿಸಿತ್ತು ಮಂಗಳ ವಾದ್ಯಗಳ, ವೇದಘೋಷಣೆಯ, ಧ್ವನಿವರ್ಧಕಗಳ ಸದ್ದುಗದ್ದಲವಿಲ್ಲದೆ, ರೇಷ್ಮೆಸೀರೆಗಳ ಆಭರಣಗಳ ಆಡಂಬರವಿಲ್ಲದ, ಸರಳ ಸಜ್ಜನಿಕೆಯ ಆದರ್ಶ ವಿವಾಹ. ಇತ್ತೀಚಿನ ದಿನಗಳಲ್ಲಿ ಎಲ್ಲೆಡೆಯೂ ಅತ್ಯಂತ ಅದ್ದೂರಿ ಹಾಗೂ ವೈಭವದ ವಿವಾಹಗಳನ್ನೆ ನೋಡುವ ಕಾಲದಲ್ಲಿ ಇದೊಂದು ಕುತೂಹಲಕಾರಿ ಮಾದರಿ ಹಾಗೂ ವಿಶೇಷವಾದ ವಿವಾಹವಾಗಿತ್ತು.

ಶ್ರೀಸಿದ್ಧಗಂಗಾ ಕಿರಿಯ ಶ್ರೀಗಳಾದ ಶ್ರೀ ನಿ|| ಪ್ರ|| ಸ್ವ|| ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ದಿವ್ಯಸಾನಿಧ್ಯವನ್ನು ವಹಿಸಿದ್ದರು. ಪೂಜ್ಯ ಕುಮಾರ ನಿಜಗುಣ ಸ್ವಾಮಿಗಳು ಶಂಭುಲಿಂಗನ ಬೆಟ್ಟ, ಚಿಲಕವಾಡಿ, ಇವರು ಷಟ್‌ಸ್ಥಲ

ಧ್ವಜಾರೋಹಣ ಮಾಡಿದರು. ಸಭಿಕರನ್ನು ರಾಜಶೇಖರ್‌ರವರು ವಿಭೂತಿ, ವೀಳ್ಯದೊಂದಿಗೆ ಸ್ವಾಗತಿಸಿ, ಶ್ರೀ ಶಿವಕುಮಾರ ಮತ್ತು ಸಂಗಡಿಗರೊಂದಿಗೆ ಸಾಮೂಹಿಕ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು.

ಈ ಶುಭ ಸಮಾರಂಭ, ಶಿವಸಮಾರಂಭಕ್ಕೆ ಶರಣ.ದೊ.ಬ: ಮೃತ್ಯುಂಜಯಪ್ಪನವರು ಎಲ್ಲರನ್ನೂ ಆತ್ಮೀಯವಾಗಿ ಸ್ವಾಗತಿಸಿದರು.

ಸಿದ್ಧಗಂಗಾ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ ಸರಳ ವಿವಾಹ ಸಮಾಜಕ್ಕೆ ಯೋಗ್ಯವಾದುದು ಹಾಗೂ ಆದರ್ಶಪ್ರಾಯವಾದುದು, ಗಂಡಿನಕಡೆ ಹತ್ತು ಜನ ಹೆಣ್ಣಿನಕಡೆ ಹತ್ತು ಜನ ಸೇರಿ ವಿವಾಹ ನಡೆಸಿ ಎನ್ನುವುದು ಸಾಧ್ಯವಿಲ್ಲ. ವಿವಾಹಕ್ಕೆ ಮುಖ್ಯವಾದದ್ದು ಮನಸಾಕ್ಷಿ, ಅಗ್ನಿಸಾಕ್ಷಿ ಇಲ್ಲಿಲ್ಲ. ಗುರುಸಾಕ್ಷಿಯಿದ್ದರೂ ಗುರು, ದಂಪತಿಗಳ ಮಧ್ಯೆ ಪ್ರವೇಶಿಸುವುದು ಸಾಧ್ಯವಿಲ್ಲ. ವಧೂವರರಿಗೆ ಆತ್ಮಸಾಕ್ಷಿಯೇ ಮುಖ್ಯ ಎಲ್ಲರ ಮಂಡೆಗೆ ಹೂವ ತರುವೆನಲ್ಲದೆ ಹಲ್ಲತಾರೆನು ಎಂಬ ಅಕ್ಕನ ಮಾತಿನಂತೆ ಬದುಕಬೇಕು ವಧೂವರರ ಜೀವನವು ಆದರ್ಶ ವಿವಾಹದಂತೆ ಆದರ್ಶವಾಗಲಿ. ಮೃತ್ಯುಂಜಯಪ್ಪನವರು ಎಲ್ಲರಿಗೂ ಆತ್ಮೀಯರಾಗಿ ಜಯಣ್ಣನವರಾಗಿರುತ್ತಾರೆ ವೃತ್ತಿಯಲ್ಲಿ ಕೃಷಿಕರಾಗಿ ಆಧ್ಯಾತ್ಮಿಕತೆಯ ತಮ್ಮ ಕೃಷಿಯನ್ನು ಸಾಗಿಸುತ್ತಿದ್ದಾರೆ. ತಮ್ಮ ವೈಯಕ್ತಿಕ ಕಷ್ಟಗಳೇನಿದ್ದರೂ ಸಮಾಜ ಸೇವೆಯಲ್ಲಿ ತೊಡಗಿ ಆದರ್ಶ ಜೀವನವನ್ನು ಸಾಗಿಸುತ್ತಿದ್ದಾರೆ. ಆದರ್ಶವನ್ನು ಹೇಳದೆ ನಡೆದು ತೋರಿದ್ದಾರೆ. ಎಂದು ಹೇಳಿ ಅವರ ಜೀವನ ಸಮಾಜಕ್ಕೆ ಆದರ್ಶ ಪ್ರಾಯವಾಗಲಿ ಎಂದರು. ಷಟ್‌ಸ್ಥಲ ಧ್ವಜಾರೋಹಣ ಮಾಡಿದ ಶ್ರೀ ಕುಮಾರ ನಿಜಗುಣಸ್ವಾಮಿಗಳು ಸಭಿಕರನ್ನುದ್ದೇಶಿಸಿ ಮಾತನಾಡಿ ಸರಳ ವಿವಾಹದ ಅವಶ್ಯಕತೆಯನ್ನು ವಿವಾಹದ ವೈಶಿಷ್ಟತೆಯನ್ನು ಹೇಳಿ ಸಂಸಾರವೆಂಬುದು ಸೋಜಿಗದ ವಿಷಯ ಎಲ್ಲಿಯ ಗಂಡು ಎಲ್ಲಿಯ ಹೆಣ್ಣು ಒಂದುಗೂಡಿ ಮಣ್ಣು ಸೇರುವವರೆಗೂ ಒಂದಾಗಿ ಜೀವನ ಸಾಗಿಸುವರು. ಸತಿಪತಿಗಳಲ್ಲಿ ಮುಖ್ಯವಾಗಿರಬೇಕಾದುದ್ದು ಅನುರಕ್ತಿ ಹಾಗೂ ಅನುರಾಗ ಅದಿಲ್ಲದ ವಿವಾಹ ಬಂಧನಕ್ಕೆ ಅರ್ಥವಿಲ್ಲವೆಂದರು.

ಸಾಹಿತಿ ಹೆಚ್.ವಿ.ವೀರಭದ್ರಯ್ಯನವರು ಜನಪದ ಗೀತೆಗಳನ್ನು ಹಾಡಿ ಜನಪದರ ದೃಷ್ಟಿಯಲ್ಲಿ ದಾಂಪತ್ಯದ ವಿಶೇಷತೆಯನ್ನು ತಿಳಿಸಿದರು. ಹನ್ನೆರಡನೇ ಶತಮಾನದ ಶರಣರು ನುಡಿದು, ನುಡಿದಂತೆ ನಡೆದು ತೋರಿದ ಮಾರ್ಗದಲ್ಲಿ ನಡೆಯಲು ಇಂತಹ ಕಾರ್ಯಕ್ರಮಗಳು ಅವಶ್ಯಕ. ಎತ್ತಣ ಮಾಮರ – ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯಾ ಎನ್ನುವಂತೆ ಈ ದಂಪತಿಗಳು ಶರಣ ಮಾರ್ಗದಲ್ಲಿ ಹೋಗಬೇಕಾಗಿದೆ. ಶರಣರು ವಚನಮಾಂಗಲ್ಯಕ್ಕೆ, ಸರಳ ವಿವಾಹಕ್ಕೆ ಮಾನ್ಯತೆಯನ್ನು ಚನ್ನಬಸವಣ್ಣನವರ ವಚನಗಳನ್ನು ಉದಹರಿಸಿ ಹೇಳಿ ಸರಳ ವಿವಾಹವನ್ನೇ ಆಚರಿಸಿದರು. ಶರಣರು ಇದಕ್ಕೆ ಪ್ರೋತ್ಸಾಹ ನೀಡಿದರು ಎಂದು ಹೇಳಿ ಇಂತಹ ಸಂದರ್ಭದಲ್ಲಿ ಶರಣರ ಮಾತುಗಳನ್ನು ತಿಳಿಯುವುದು ಒಳ್ಳೆಯದು ಬಸವಾದಿ ಪ್ರಥಮರು ಎಲ್ಲರಿಗೂ ಮಾದರಿ ಎಂದು ತಿಳಿಸಿದರು.

ಅಮೃತ ವೀರಭದ್ರಯ್ಯನವರು ಹನ್ನೆರಡನೇ ಶತಮಾನದ ಶರಣೆಯರ ಆದರ್ಶ ಬದುಕನ್ನು ಅವರ ಜೀವನದ ಸಾರ್ಥಕ್ಯವನ್ನು ಅವರ ಜೀವನದ ಘಟನೆಗಳ ಮೂಲಕ ವಿವರಿಸಿ ದಾಂಪತ್ಯ ಜೀವನದ ಶ್ರೇಷ್ಠತೆಯನ್ನು ಹೇಳಿದರು. ಸರಳ ವಿವಾಹ ಸಮಾಜಕ್ಕೆ ಆರೋಗ್ಯ ಕರಪದ್ಧತಿಯಾಗಿದೆ. ಜೀವನವೆಂಬುದು ಸತಿಪತಿಯರು ಒಬ್ಬರನೊಬ್ಬರು ಅರಿತು ನಡೆಯುವುದರಲ್ಲಿದೆ. ಸರಳ ವಿವಾಹ ಸಮಾಜಕ್ಕೆ ಉತ್ತಮವಾದರೆ ಸರಳ ಜೀವನ ಕುಟುಂಬಕ್ಕೆ ಉತ್ತಮವಾದದು. ಶರಣರ ಆದರ್ಶಬಾಳು ಎಲ್ಲರಿಗೂ ನವಕಾಲಕ್ಕೂ ಆದರ್ಶವಾದದು ಎಂದರು.

ಬೆಟದಹಳ್ಳಿ ಶ್ರೀ ಶ್ರೀ ಚಂದ್ರಶೇಖರಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ ಲೀಲೆಯಾದೆಡೆ ಉಮಾಪತಿ ಲೀಲೆ ತಪ್ಪಿದಡೆ ಸ್ವಯಂಭೂ. 'ಸಂಸಾರ'ವೆಂಬುದು ಲೌಕಿಕ ಜೀವನವನ್ನು ಕುರಿತು ಶರಣರು ಹೇಳಿದ ಮಾತು. ಆ ಜೀವನ ಶುದ್ಧವಾದುದು ಶ್ರೇಷ್ಠವಾದುದು ಆಗಬೇಕು. ಪರಿಶುದ್ಧ ಜೀವನ ಸಾಗಿಸಿ ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿದಾಗಲೇ ಮಾನವ ಜನ್ಮದ ಸಾರ್ಥಕತೆ ಎಂದು ಹೇಳಿದರು.

ವಿವಾಹವೆಂಬುದು ಎರಡು ದೇಹಗಳ ಸಂಬಂಧವಲ್ಲ, ಜೀವ ಜೀವದ ಭಾವಸಂಗಮ. ಪಾರ್ವತಿ ಪರಮೇಶ್ವರರ, ಜಗಜ್ಯೋತಿ ಶ್ರೀ ಗುರುಬಸವೇಶ್ವರರ, ಸಿದ್ಧಗಂಗಾ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ನೆನೆದು, ಸಿದ್ಧಗಂಗಾ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮೀಜಿ, ಕುಮಾರ ನಿಜಗುಣ ಸ್ವಾಮೀಜಿ, ಹರಗುರು ಚರಮೂರ್ತಿಗಳಿಗೆ ತಮ್ಮ ಮಾತಾ-ಪಿತರುಗಳಿಗೆ ನಮಸ್ಕರಿಸಿ ಅಲ್ಲಿ ನೆರೆದಿದ್ದ ಗಣಸಾಕ್ಷಿಯಾಗಿ ದಾಂಪತ್ಯ ಜೀವನಕ್ಕಾಗಿ ಪ್ರತಿಜ್ಞೆ ಸ್ವೀಕರಿಸಿ ವಿವಾಹವಾದರು. ಈ ಸುಂದರ ಕಾರ್ಯಕ್ರಮವನ್ನು ಶ್ರೀಮತಿ ಭ್ರಮರಾ ರಾಜಶೇಖರಯ್ಯ ಯಶಸ್ವಿಯಾಗಿ ನಿರ್ವಹಿಸಿದರು. ಶ್ರೀ ಡಿ.ಎಸ್. ಪರಮಶಿವಯ್ಯ ವಂದಿಸಿದರು.

ವರದಿ : ಅಮೃತ ವೀರಭದ್ರಯ್ಯ





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೮೯೨. | ಶ್ರೀ ಜಿ.ಹೆಚ್. ಸೋಮಶೇಖರಯ್ಯ, ಮುಖ್ಯ ಶಿಕ್ಷಕರು, ಶ್ರೀ ಶಾಲಿವಾಹನ ಪ್ರೌಢಶಾಲೆ, ತಂಡಗ, ತುರುವೇಕೆರೆ ತಾಲ್ಲೂಕು | ೨,೦೦೦.೦೦ |
| ೧೮೯೩. | ಶ್ರೀ ಕೆ.ವಿ. ಪ್ರೇಮಕುಮಾರ್, ದ್ವಿ.ದ.ಸ. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ನಾರಸಂದ್ರ, ಮಾಗಡಿ ತಾಲ್ಲೂಕು | ೧,೦೦೦.೦೦ |
| ೧೮೯೪. | ಶ್ರೀ ಆರ್. ಶಿವರುದ್ರಯ್ಯ, ದ್ವಿ.ದ.ಸ. | ೨,೦೦೦.೦೦ |
| ೧೮೯೫. | ಶ್ರೀಲಕ್ಷ್ಮಿ, ನಂ.೧೭೪, ೫ನೇ ಕ್ರಾಸ್, ೬ನೇ ಮುಖ್ಯರಸ್ತೆ, ಕಮಲನೆಹರು ಬಡಾವಣೆ, ಯಶವಂತಪುರ, ಬೆಂಗಳೂರು-೨೨ | ೨,೦೦೧.೦೦ |
| ೧೮೯೬. | ಶ್ರೀಮತಿ ಎಲ್. ಸುಮಿತ್ರಮ್ಮ, ಸ.ಶಿ. | ೨,೦೦೧.೦೦ |
| ೧೮೯೭. | ಶ್ರೀ ವೈ.ಸಿ. ಶಿವಾನಂದಸ್ವಾಮಿ, ದೈ.ಶಿ.ಶಿ | ೨,೦೦೧.೦೦ |
| ೧೮೯೮. | ಶ್ರೀ ಡಿ. ನಾಗಣ್ಣ, ವೈ.ಶಿ.ಶಿ. | ೨,೦೦೧.೦೦ |
| ೧೮೯೯. | ಶ್ರೀ ಕೆ. ಚಂದ್ರಯ್ಯ, ದ್ವಿ.ದ.ಸ. | ೨,೦೦೧.೦೦ |
| ೧೯೦೦. | ಶ್ರೀ ಎನ್. ಎಂ. ಬಸವರಾಜಯ್ಯ, ಪ್ರ.ಶಾ.ಸ. | ೨,೦೦೧.೦೦ |
| ೧೯೦೧. | ಶ್ರೀ ವಿರೂಪಾಕ್ಷಯ್ಯ, ಸೇವಕರು | ೨,೦೦೧.೦೦ |
| | ಕ್ರ.ಸಂ. ೧೮೯೪ ರಿಂದ ೧೯೦೧ರ ವರೆಗಿನ ವಿಳಾಸ ಶ್ರೀ ಮಲ್ಲಿಕಾರ್ಜುನ ಗ್ರಾಮಾಂತರ ಪ್ರೌಢಶಾಲೆ, ದೊಡ್ಡಗುಣಿ, ಗುಬ್ಬಿ ತಾಲ್ಲೋಕು - ಈ ಶಾಲೆಯ ನೌಕರವರ್ಗದವರು) | |
| ೧೯೦೨. | ಶ್ರೀ ಬಸವರಾಜಪ್ಪ, ವ್ಯವಸ್ಥಾಪಕರು, ಲಿಂಗಾಯತಧರ್ಮದ ಪ್ರಾರ್ಥನಾ ಮಂದಿರ, ೧೧೪ನೇ ಮುಖ್ಯರಸ್ತೆ, ಜೆ.ಸಿ. ನಗರ, (ಕುರುಬರಹಳ್ಳಿ) ಬೆಂಗಳೂರು-೮೬ | ೧೨,೦೦೦.೦೦ |
| ೧೯೦೩. | ಶ್ರೀ ಮುನಿರಾಜು, ಸೇವಕರು, ಶ್ರೀ ಮಂಜುನಾಥ ಬಾಲಕಿಯರ ಪ್ರೌಢಶಾಲೆ, ನೆಲಮಂಗಲ, ಬೆಂ.ಗ್ರಾ. ಜಿಲ್ಲೆ | ೨,೦೦೦.೦೦ |
| ೧೯೦೪. | ಶ್ರೀ ಸಿದ್ಧಗಂಗಾ ಪಟ್ಟಣ ಸಹಕಾರಿ ಬ್ಯಾಂಕ್, ತುಮಕೂರು | ೩,೫೦೦೦೦.೦೦ |
| ೧೯೦೫. | ಶ್ರೀಮತಿ ನಂಜಮ್ಮ ಕೋಂ ಲೇಟ್ ಅಣ್ಣಯ್ಯಪ್ಪ, ಉಜ್ಜನಿಹೊಸಹಳ್ಳಿ, ದೊಡ್ಡ ಬಳ್ಳಾಪುರ ತಾಲ್ಲೂಕು | ೨,೦೦೦.೦೦ |
| ೧೯೦೬. | ಶ್ರೀ ಪಿ. ಜಗನ್ನಾಥ್, ಸಿ.ಪಿ.ಐ.ಎಂ. ಮುಖಂಡರು, ತಲಗಟ್ಟಪುರ, ಕನಕಪುರ ರಸ್ತೆ, ಬೆಂಗಳೂರು - ೮೬ | ೫,೨೦೧.೦೦ |
| ೧೯೦೭. | ಶ್ರೀ ಜಿ. ಶಿವಲಿಂಗ ಸ್ವಾಮಿ ಮತ್ತು ಕುಟುಂಬ, ಎಫ್.ಎ. ೧:೮೨ ಪೇಪರ್ ಟೌನ್, ಭದ್ರಾವತಿ - ೫೭೭೩೦೨ | ೨,೦೦೨.೦೦ |
| ೧೯೦೮. | ಷಾ ಪುಟ್ಟಣ್ಣ, ಶ್ರೀಮತಿ ಯಶೋದಾ ಮತ್ತು ಮಕ್ಕಳು. ಷಾ. ಸಿದ್ದೇಗೌಡ ಅಂಡ್ ಕಂಪನಿ, ಸಕಲೇಶಪುರ, ಹಾಸನ ಜಿಲ್ಲೆ | ೧,೦೦೫.೦೦ |
| ೧೯೦೯. | ಕು. ಪಿ.ಎಸ್.ಶೋಭಾ, ಬಿನ್ : ಶ್ರೀ ಶಾಂತಯ್ಯ, ಪಾಲನಹಳ್ಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾ. ಜಿಲ್ಲೆ | ೪,೦೦೦.೦೦ |
| ೧೯೧೦. | ಕು. ಆರ್. ಗೀತಾ ಬಿನ್. ಶ್ರೀ ರಾಜಣ್ಣ, ಸೋಲುರು ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾ. ಜಿಲ್ಲೆ. | ೪,೦೦೦.೦೦ |
| ೧೯೧೧. | ಶ್ರೀ ಟಿ.ಎಂ. ಮಹದೇವಪ್ರಸಾದ್, ಬಿನ್. ಲೇಟ್ ಎಸ್.ಮಲ್ಲಪ್ಪ, ತಮ್ಮಡಹಳ್ಳಿ, ಚಾಮರಾಜನಗರ ಜಿಲ್ಲೆ | ೪,೦೦೦.೦೦ |
| ೧೯೧೨. | ಕು. ಜಿ. ರತನ್, ಬಿನ್. ಶ್ರೀ ಜಿ.ಎಸ್. ಗುರುಬಸವಯ್ಯ, ಮಾರುತಿನಗರ, ಪೋಲೀಸ್ ವಸತಿಗೃಹ, ಅರಸೀಕೆರೆ, ಹಾಸನ ಜಿಲ್ಲೆ | ೪,೦೦೦.೦೦ |
| ೧೯೧೩. | ಶ್ರೀ ಎಂ.ಎಸ್. ಮಧುಕುಮಾರ್, ಬಿನ್ ಎಂ.ಸಿ. ಸಣ್ಣಸ್ವಾಮಿ, ಮಾದಿಹಳ್ಳಿ ಅಟ್ ಪೋಸ್ಟ್, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ. | ೪,೦೦೦.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೯೧೪. | ಕು. ಬಿ.ವಿ. ಲತಾ ಬಿನ್ ಬಿ.ಎಸ್. ವೀರಭದ್ರಪ್ಪ<br>ಬೆಟ್ಟಸೂಯೇ, ಹಾಸನ ಜಿಲ್ಲೆ. | ೪,೦೦೦.೦೦ |
| ೧೯೧೫. | ಶ್ರೀ ಕು. ದಾನಮ್ಮಐಗಳಿ ಬಿನ್ ದುಂಡಪ್ಪ ಐಗಳಿ<br>ಇಂಗಳೇಶ್ವರ-ಬಸವನಬಾಗೇವಾಡಿ ತಾ.<br>ವಿಜಾಪುರ ಜಿಲ್ಲೆ. | ೪,೦೦೦.೦೦ |
| ೧೯೧೬. | ಶ್ರೀಮತಿ ಸಿ. ಸತ್ಯಪ್ರೇಮಕುಮಾರಿ ಎಸ್. ಶಿವಣ್ಣ<br>ಬಾಪೂಜಿ ಜೂನಿಯರ್ ಕಾಲೇಜು ಮುಂಭಾಗ,<br>ಬಾರ್‌ಲೈನ್, ತುಮಕೂರು. | ೧,೦೦೧.೦೦ |
| | (ಶ್ರೀಮತಿ ಈರಮ್ಮ ಮತ್ತು ಶ್ರೀ ಸಿದ್ದಪ್ಪ ತಿಂಗಳೂರು ಇವರ ಜ್ಞಾಪಕಾರ್ಥ) | |
| ೧೯೧೭. | ಶ್ರೀ ಟಿ.ಎಸ್. ಗುರುಬಸವಯ್ಯ ಮತ್ತು<br>ಶ್ರೀಮತಿ ಗೌರಮ್ಮ<br>ಮಾಳೂರು ಅಟ್ ಅಂಡ್ ಪೋಸ್ಟ್,<br>ತೀರ್ಥಹಳ್ಳಿ ತಾಲ್ಲೂಕು<br>ಶಿವಮೊಗ್ಗ ಜಿಲ್ಲೆ. | ೫,೦೦೧.೦೦ |
| ೧೯೧೮. | ಶ್ರೀ ಎನ್. ಪ್ರಕಾಶ<br>ಶ್ರೀ ಸಿದ್ಧಗಂಗಾ ಸಂ.ಪ. ಪೂರ್ವ ವಿದ್ಯಾಲಯ,<br>ದೇವನಹಳ್ಳಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |
| ೧೯೧೯. | ಶ್ರೀಮತಿ ಹೇಮಲತಾ ನಾಗರಾಜ ಪಾಟೀಲ್<br>ಶ್ರೀ ಸಿದ್ಧಗಂಗಾ ಮಹಿಳಾ ಪ್ರಥಮದರ್ಜೆ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೦.೦೦ |
| ೧೯೨೦. | ಶ್ರೀ ಜಿ.ಎಸ್. ಪಂಚಾಕ್ಷರಿ ಬಿ.ಇ.,<br>"ಗ್ರೀಷ್ಮ ನಿಲಯ", ನಂ. ೧೪೭, ೩ನೇ ಕ್ರಾಸ್,<br>ವಿನಯ ಹೌಸ್ ಬಿಲ್ಡಿಂಗ್,<br>ಕೋ-ಆಪರೇಟಿವ್ ಸೊಸೈಟಿ,<br>೪ನೇ ಸ್ಟೇಜ್, ೯ನೇ ಬ್ಲಾಕ್, ನಾಗರಬಾವಿ,<br>ಬೆಂಗಳೂರು – ೫೬೦ ೦೭೨. | ೬,೦೦೦.೦೦ |
| ೧೯೨೧. | ಶ್ರೀ ಎಸ್.ಜಿ. ಸೋಮಶೇಖರ್<br>ಮುಖ್ಯ ಶಿಕ್ಷಕರು, | ೨,೦೦೦.೦೦ |
| ೧೯೨೨. | ಶ್ರೀ ಎಂ.ಎನ್. ಶಿವನಂಜಪ್ಪ<br>ದ್ವಿ.ದ.ಸ., | ೨,೦೦೧.೦೦ |
| | ಕ್ರ.ಸಂ. ೧೯೨೧ ರಿಂದ ೧೯೨೨ರ ವರೆಗಿನ ವಿಳಾಸ<br>ಶ್ರೀ ಹುತ್ತಸಿದ್ಧೇಶ್ವರ ಗ್ರಾಮಾಂತರ ಪ್ರೌಢಶಾಲೆ,<br>ಮಾದಿಹಳ್ಳಿ, ತುರುವೇಕೆರೆ ತಾಲ್ಲೂಕು. | |
| ೧೯೨೩. | ಶ್ರೀಮತಿ ಮೈತ್ರೇಯಿ ಮತ್ತು ಶ್ರೀ ವೀರಣ್ಣಯ್ಯ<br>ನಂ. ೩೨/೫, ೩ನೇ ಕ್ರಾಸ್, ಕೆ.ವಿ. ಲೇ ಔಟ್,<br>೪ನೇ ಬ್ಲಾಕ್, ಜಯನಗರ ಪೂರ್ವ,<br>ಬೆಂಗಳೂರು – ೫೬೦ ೦೧೧. | ೨,೦೦೨.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೯೨೪. | ಶ್ರೀ ಜಿ.ಎಲ್. ರಾಮಕೃಷ್ಣಯ್ಯ<br>ಸಹ ಶಿಕ್ಷಕರು,<br>ಕರ್ನಾಟಕ ನವಚೇತನ ಅಂಧಮಕ್ಕಳ ಪಾಠಶಾಲೆ,<br>ಕುವೆಂಪುನಗರ, ಕುಣಿಗಲ್ ಟೌನ್,<br>ತುಮಕೂರು ಜಿಲ್ಲೆ. | ೨,೦೦೧.೦೦ |
| ೧೯೨೫. | ಶ್ರೀ ಕೆ. ನಾಗರಾಜು<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಆರೆಯೂರು, ತುಮಕೂರು ತಾ. | ೨,೦೦೧.೦೦ |
| ೧೯೨೬. | ಶ್ರೀ ಸಿ.ಎನ್. ಸದಾಶಿವಯ್ಯ<br>ಪ್ರಾಂಶುಪಾಲರು | ೧,೦೦೦.೦೦ |
| ೧೯೨೭. | ಶ್ರೀಮತಿ ಯು.ಪಿ. ಉಮಾದೇವಿ<br>ಉಪನ್ಯಾಸಕರು | ೧,೦೦೦.೦೦ |
| ೧೯೨೮. | ಶ್ರೀ ಎ.ಪಿ. ಶಿವಕುಮಾರ<br>ಉಪನ್ಯಾಸಕರು | ೧,೦೦೦.೦೦ |
| ೧೯೨೯. | ಶ್ರೀಮತಿ ಟಿ.ಜಿ. ವಿನುತ<br>ಉಪನ್ಯಾಸಕರು | ೧,೦೦೦.೦೦ |
| ೧೯೩೦. | ಶ್ರೀಮತಿ ಟಿ.ಆರ್. ಉಷಾ<br>ಉಪನ್ಯಾಸಕರು | ೧,೦೦೦.೦೦ |
| ೧೯೩೧. | ಶ್ರೀ ಕೆ.ಆರ್. ರಂಗನಾಥಸ್ವಾಮಿ<br>ಉಪನ್ಯಾಸಕರು | ೧,೦೦೦.೦೦ |
| ೧೯೩೨. | ಶ್ರೀ ಡಿ.ಆರ್. ವೇಣುಗೋಪಾಲ್<br>ಉಪನ್ಯಾಸಕರು | ೧,೦೦೦.೦೦ |
| ೧೯೩೩. | ಶ್ರೀಮತಿ ಪಿ. ಸುಧಾರಾಣಿ<br>ಉಪನ್ಯಾಸಕರು | ೧,೦೦೦.೦೦ |
| ೧೯೩೪. | ಶ್ರೀಮತಿ ಡಿ.ಎಂ. ದ್ರಾಕ್ಷಾಯಣಮ್ಮ<br>ಉಪನ್ಯಾಸಕರು | ೧,೦೦೦.೦೦ |
| ೧೯೩೫. | ಶ್ರೀ ಹನುಮಂತಪ್ಪ<br>ಉಪನ್ಯಾಸಕರು | ೧,೦೦೦.೦೦ |
| ೧೯೩೬. | ಶ್ರೀ ಡಿ.ಎಂ. ಪ್ರಸನ್ನಕುಮಾರ್<br>ಉಪನ್ಯಾಸಕರು | ೧,೦೦೦.೦೦ |
| ೧೯೩೭. | ಶ್ರೀ ಎಂ. ವೆಂಕಟರಮಣಪ್ಪ<br>ಉಪನ್ಯಾಸಕರು | ೧,೦೦೦.೦೦ |
| ೧೯೩೮. | ಶ್ರೀ ಪ್ರಭಾಕರ<br>ಉಪನ್ಯಾಸಕರು | ೧,೦೦೦.೦೦ |
| ೧೯೩೯. | ಶ್ರೀ ಎಸ್.ಎನ್. ಯಾವಗಲ್<br>ಉಪನ್ಯಾಸಕರು | ೧,೦೦೦.೦೦ |
| | ಕ್ರ.ಸಂ. ೧೯೨೯ ರಿಂದ ೧೯೪೦ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು<br>ಬಿ.ಬಿ. ರಸ್ತೆ ತುಮಕೂರು-೨. | |

*(ಮುಂದುವರೆಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೪೦೧. | ಶ್ರೀ ಕೆ.ಎಸ್. ಬಸವರಾಜಯ್ಯ<br>ನಂ.೭೨ (೨೮೮) ೧ನೇ ಮುಖ್ಯರಸ್ತೆ<br>ಐ ಎಸ್ ಇ ಸಿ ದ ನಂತರದ ಮುಖ್ಯರಸ್ತೆ<br>ನಾಗರಬಾವಿ,<br>ಬೆಂಗಳೂರು - ೫೬೦ ೦೭೨. | ೧೦೦೧.೦೦ |
| ೧೪೦೨. | ಶ್ರೀ ರುದ್ರೇಶಯ್ಯ ಪಿ.ಜಿ.<br>ಸಹಶಿಕ್ಷಕರು | ೧೦೦೧.೦೦ |
| ೧೪೦೩. | ಶ್ರೀ ಸಂಗಪ್ಪ<br>ಸಹಶಿಕ್ಷಕರು | ೧೦೦೧.೦೦ |
| ೧೪೦೪. | ಶ್ರೀ ಶಿವಕುಮಾರ್.ಬಿ.<br>ದೈಹಿಕ ಶಿಕ್ಷಕರು | ೧೦೦೧.೦೦ |
| | ಕ್ರ.ಸಂ. ೧೪೦೨ ರಿಂದ ೧೪೦೪ರ ವರೆಗಿನ ವಿಳಾಸ<br>ಶ್ರೀ ಉದ್ದಾನ ಶಿವಯೋಗೀಶ್ವರ ಗ್ರಾಮಾಂತರ ಪ್ರೌಢಶಾಲೆ,<br>ಗಟ್ಟೀಪುರ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೧೪೦೫. | ಶ್ರೀ ಜಿ. ಸಿದ್ಧನಂಜಪ್ಪ<br>ನಂ.೪೬, 'ಶ್ರೀ ಶಿವಗಿರಿ' ಬಿನ್ನಿ ಲೇ ಔಟ್<br>ಅತ್ತಿಗುಪ್ಪೆ, ವಿಜಯನಗರ,<br>ಬೆಂಗಳೂರು- ೫೬೦ ೦೪೦ | ೧೦೦೧.೦೦ |
| ೧೪೦೬. | ಶ್ರೀ ಎ.ಎಸ್. ಪಾಟೀಲ್<br>ಮಾತೃಆಲಯ ಕಟ್ಟಡ,<br>ಎಸ್.ಪಿ. ಎಸ್. ಬ್ಯಾಂಕ್ ಎದುರು,<br>ಸಂಡೂರು, ಬಳ್ಳಾರಿ ಜಿಲ್ಲೆ. | ೨೫,೦೦೦.೦೦ |
| ೧೪೦೭. | ಶ್ರೀ ಬಿ. ನಂಜಪ್ಪ<br>ಕಂಟ್ರಾಕ್ಟರ್<br>ಚೆನ್ನಾಪುರ, ಹರದನಹಳ್ಳಿ ಅಂಚೆ,<br>ಹೊಳೇನರಸೀಪುರ ತಾಲ್ಲೂಕು,<br>ಹಾಸನ ಜಿಲ್ಲೆ - ೫೭೩೨೧೧. | ೧೦೦೦.೦೦ |
| ೧೪೦೮. | ಶ್ರೀ ಹೆಚ್. ಜಯರಾಮಯ್ಯ<br>ಸಹಾಯಕ | ೧೦೦೦.೦೦ |
| ೧೪೦೯. | ಶ್ರೀ ಸಿ.ರಮೇಶ್<br>'ಡಿ' ಗ್ರೂಪ್ ನೌಕರರು | ೧೦೦೦.೦೦ |
| ೧೪೧೦. | ಶ್ರೀ ಎಂ. ರುದ್ರಮೂರ್ತಿ<br>ಸಹ ಶಿಕ್ಷಕರು | ೧೦೦೦.೦೦ |
| ೧೪೧೧. | ಎಂ. ಸೋಮಸುಂದರ್<br>ಸಹ ಶಿಕ್ಷಕರು | ೧೦೦೦.೦೦ |
| | ಕ್ರ.ಸಂ. ೧೪೦೮ ರಿಂದ ೧೪೧೧ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ಹಿರೇಹಳ್ಳಿ, ತುಮಕೂರು ತಾಲ್ಲುಕು. | |
| ೧೪೧೨. | ಶ್ರೀ ರೇಷ್ಮಾತಾಜ್ ಟಿ.<br>ಹಿಂದಿ ಸಹಶಿಕ್ಷಕರು<br>ಶ್ರೀ ಸಿದ್ಧಗಂಗಾ ಗ್ರಾ.ಪ್ರೌ.ಶಾಲೆ.<br>ಬಿ.ಹೆಚ್.ರಸ್ತೆ<br>ತುಮಕೂರು - ೫೭೨೧೦೨. | ೧೦೦೦.೦೦ |
| ೧೪೧೩. | ಶ್ರೀ ಬಿ.ಶಿವಪ್ರಕಾಶ್<br>ದ್ವಿ.ದ.ಸ<br>ಬ್ಯಾಲಕೆರೆ ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾ.ಜಿಲ್ಲೆ. | ೧೦೦೦.೦೦ |
| ೧೪೧೪. | ಶ್ರೀ ಕೆ. ಕೃಷ್ಣಯ್ಯ<br>ದೈಹಿಕ ಶಿಕ್ಷಕರು<br>ಶ್ರೀ ರಂಗನಾಥ ಗ್ರಾ. ಪ್ರೌಢಶಾಲೆ,<br>ನೇರಳೇಕೆರೆ, ಮಧುಗಿರಿ ತಾಲ್ಲೂಕು. | ೧೦೦೦ |
| ೧೪೧೫. | ಶ್ರೀಮತಿ ಪಾರ್ವತಮ್ಮ ಮತ್ತು<br>ಶ್ರೀ ಆರ್. ಚಂದ್ರಶೇಖರಯ್ಯ<br>ನಿವೃತ್ತ ಶಿಕ್ಷಕರು<br>ಸಿರದನಹಳ್ಳಿ, ರಾಮನಾಥಪುರ ಅಂಚೆ<br>ಅರಕಲಗೂಡು ತಾಲ್ಲೂಕು,<br>ಹಾಸನ ಜಿಲ್ಲೆ | ೧೦೦೫.೦೦ |
| ೧೪೧೬. | ಶ್ರೀಮತಿ ನಸೀಮ್ ಉನ್ನೀಸ<br>ಹಿಂದಿ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಗ್ರಾ.ಪ್ರೌಢ ಶಾಲೆ,<br>ಹೆಡಕನಹಳ್ಳಿ, ಹೊಸಕೋಟೆ ತಾಲ್ಲೂಕು,<br>ಬೆಂಗಳೂರು ಗ್ರಾ. ಜಿಲ್ಲೆ. | ೧೦೦೧.೦೦ |
| ೧೪೧೭. | ಶ್ರೀಮತಿ ಎಂ.ಎಸ್. ಮಂಜುಳ<br>ಬಿನ್. ಎಂ.ಬಿ. ಸಿದ್ದಪ್ಪ<br>೨೪೧೬ : ೪, ಕೆ.ವಿ. ಕೃಪ, ಎಂ.ಸಿ.ಸಿ. 'ಎ' ಬ್ಲಾಕ್,<br>೧೦ನೇ ಮುಖ್ಯರಸ್ತೆ, ೨ನೇ ಕ್ರಾಸ್,<br>ದಾವಣಗೆರೆ-೫೭೭೦೦೪. | ೧೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೪೧೮. | ಶ್ರೀ ಟಿ.ಜಿ. ಉಮಾಶಂಕರ<br>ಸಹ ಶಿಕ್ಷಕರು<br>ಶ್ರೀ ಶಾಲಿವಾಹನ ಪ್ರೌಢಶಾಲೆ, (ಸಿದ್ಧಗಂಗಾ ಶಾಖೆ)<br>ತಂಡಗ, ತುರುವೇಕೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧೦೦೧.೦೦ |
| ೧೪೧೯. | ಶ್ರೀ ಕೆ.ಎಸ್. ಪರಮೇಶ್ವರಯ್ಯ<br>ನಿವೃತ್ತ ಅಧೀಕ್ಷಕರು<br>ಕಗ್ಗೆರೆ ಮತ್ತು ಪೋಸ್ಟ್,<br>ಕುಣಿಗಲ್ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧೦೦೧.೦೦ |
| ೧೪೨೦. | ಶ್ರೀ ಹೆಚ್. ಹುಚ್ಚವೀರಯ್ಯ<br>ಸಹ ಶಿಕ್ಷಕರು | ೧೦೦೦.೦೦ |
| ೧೪೨೧. | ಶ್ರೀ ಎಸ್. ರೇಣುಕಾರಾಧ್ಯ<br>ಸಹ ಶಿಕ್ಷಕರು | ೧೦೦೦.೦೦ |
| | ಕ್ರ.ಸಂ. ೧೪೨೦ ರಿಂದ ೧೪೨೧ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ಹಿರೇಹಳ್ಳಿ, ತುಮಕೂರು ತಾಲ್ಲುಕು. | |
| ೧೪೨೨. | ಶ್ರೀ ಎ.ಸಿ. ಶಿವಲಿಂಗಪ್ಪ<br>ನಂ. ೩೫೮, ೧೫ನೇ ಮುಖ್ಯರಸ್ತೆ,<br>ಎಂ.ಸಿ. ಬಡಾವಣೆ, ವಿಜಯನಗರ,<br>ಬೆಂಗಳೂರು - ೪೦ | ೧೦೦೦.೦೦ |
| ೧೪೨೩. | ಶ್ರೀ ಟಿ.ಎಂ. ಸಿದ್ಧರಾಮಯ್ಯ<br>ದೈ.ಶಿ.ಶಿ<br>ತಿಪ್ಪೂರು, ಗುಬ್ಬಿ ತಾಲ್ಲೂಕು | ೧೦೦೨.೦೦ |
| ೧೪೨೪. | ಶ್ರೀ ಎಸ್. ಬಿ. ಗಂಗಣ್ಣ<br>ಪ್ರಾಂಶುಪಾಲರು | ೧೦೦೦.೦೦ |
| ೧೪೨೫. | ಶ್ರೀ ಮೂರ್ತಿ<br>ಸಹ ಶಿಕ್ಷಕರು | ೧೦೦೦.೦೦ |
| | ಕ್ರ.ಸಂ. ೧೪೨೪ ರಿಂದ ೧೪೨೫ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಸಂ. ಪ. ಪೂರ್ವ ಕಾಲೇಜು,<br>ಬೂದಿಗೆರೆ ದೇವನಹಳ್ಳಿ ತಾಲ್ಲೂಕು. | |
| ೧೪೨೬. | ಶ್ರೀಮತಿ ಎಂ. ಸುಶೀಲಮ್ಮ<br>ದ್ವಿ ದ ಸ<br>ಶ್ರೀ ಜಯಮಂಗಲಿ ಗ್ರಾ.ಪ್ರೌಢ ಶಾಲೆ,<br>ನಿಟ್ರಹಳ್ಳಿ, ಮಧುಗಿರಿ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧೦೦೧.೦೦ |
| ೧೪೨೭. | ಶ್ರೀ ಬಿ.ಎಸ್. ಪಂಚಾಕ್ಷರಿ<br>ನಂ.೧೪೭, ೩ನೇ 'ಸಿ' ಮುಖ್ಯರಸ್ತೆ,<br>ವಿಹೆಚ್‌ಬಿಸಿಎಸ್, ಲೇ ಔಟ್, ೪ನೇ ಸ್ಟೇಜ್,<br>೯ನೇ ಬಿ.ಡಿ.ಎ. ನಾಗರಬಾವಿ,<br>ಬೆಂಗಳೂರು -೫೬೦ ೦೭೨. | ೧೫೫೫.೦೦ |
| ೧೪೨೮. | ಶ್ರೀ ಹೊನ್ನಪ್ಪ<br>ನಂ.೩೨, ಕೆಂಪೇಗೌಡನಗರ,<br>ಮಾಗಡಿ ಮುಖ್ಯರಸ್ತೆ, ವಿಶ್ವ ನೀಡಮ ಅಂಚೆ,<br>ಬೆಂಗಳೂರು - ೫೬೦ ೦೦೯. | ೧೧೦೦.೦೦ |
| ೧೪೨೯. | ಶ್ರೀ ಎಸ್. ರಾಜಣ್ಣ<br>(ಹೆಚ್.ಎ.ಎಲ್)<br>ನಂ.೧೫, ೬ನೇ ಕ್ರಾಸ್, ಕುರುಬರಹಳ್ಳಿ,<br>ಬೆಂಗಳೂರು - ೫೬೦ ೦೮೬. | ೧೦೦೦.೦೦ |
| ೧೪೩೦. | ಶ್ರೀ ಬಿ.ಬಸವಾರಾಧ್ಯ<br>ಬಂಡೇಮಠ, ಬಾಣವಾಡಿ ಅಂಚೆ,<br>ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾ. ಜಿಲ್ಲೆ. | ೧೦೦೧.೦೦ |
| ೧೪೩೧. | ಶ್ರೀ ವೈ. ಎಸ್. ಮುದ್ದವೀರಯ್ಯ<br>ನಿ.ಮು.ಶಿ.<br>ಎಡೇಹಳ್ಳಿ, ಬೆಟ್ಟದಹಳ್ಳಿಮಠ ಅಂಚೆ,<br>ಕುಣಿಗಲ್ ತಾಲ್ಲುಕು, ತುಮಕೂರು ಜಿ. | ೧೦೦೫.೦೦ |
| ೧೪೩೨. | ಶ್ರೀ ಹೆಚ್. ಪಿ. ಬಸವೇಗೌಡ<br>ನಂ.೯೬೦, ೩ನೇ ಬ್ಲಾಕ್, ೩ನೇ ಸ್ಟೇಜ್,<br>೯ನೇ ಮೈನ್, ಬಸವೇಶ್ವರ ನಗರ,<br>ಬೆಂಗಳೂರು - ೭೯. | ೨೦೦೧.೦೦ |
| ೧೪೩೩. | ಶ್ರೀ ನಾಗರತ್ನ ಕೆ.ಬಿ. ಸಿದ್ಧಲಿಂಗಯ್ಯ<br>ನಂ.೧೯, ೨ನೇ ಅಡ್ಡರಸ್ತೆ,<br>ಸುಬ್ಬಣ್ಣ ಗಾರ್ಡನ್, ವಿಜಯನಗರ,<br>ಬೆಂಗಳೂರು - ೪೦ | ೧೦೦೧.೦೦ |
| ೧೪೩೪. | ಶ್ರೀ ಸಿದ್ಧಗಂಗಯ್ಯ<br>'ಡಿ' ಗ್ರೂಪ್ ನೌಕರರು<br>ಶ್ರೀ ಸಿದ್ಧಗಂಗಾ ಪದವಿ ಪೂರ್ವ ಕಾಲೇಜು,<br>ಹಾಲನೂರು, ತುಮಕೂರು, ತಾ॥ | ೧೦೦೧.೦೦ |
| ೧೪೩೫. | ಶ್ರೀ ಜಿ.ಹೆಚ್. ಕೆಂಪರಾಜು<br>ಸಹ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಗ್ರಾ.ಪ್ರೌಢ ಶಾಲೆ,<br>ಹಿರೇಹಳ್ಳಿ, ತುಮಕೂರು ತಾ. | ೧೦೦೧.೦೦ |
| ೧೪೩೬. | ಶ್ರೀಮತಿ ಸಿ.ಎಸ್.ರಾಜೇಶ್ವರಿ<br>ಪ್ರತಿಶಿಕ್ಷಕರು<br>ಶ್ರೀ ಸಿದ್ಧಗಂಗಾ ಶಿಕ್ಷಕ ತರಬೇತಿ ಸಂಸ್ಥೆ,<br>ಬಿ.ಹೆಚ್. ರಸ್ತೆ, ತುಮಕೂರು - ೨ | ೧೦೦೧.೦೦ |
| ೧೪೩೭. | ಶ್ರೀ ಕೆ.ಎಸ್. ಜೈಶಂಕರ್<br>ದೈಹಿಕ ಶಿಕ್ಷಕರು<br>ಶ್ರೀ ಬೆಳಧರ ಗ್ರಾ. ಪ್ರೌಢಶಾಲೆ, ಬೆಳಧರ,<br>ತುಮಕೂರು ತಾಲ್ಲುಕು. | ೧೦೦೧.೦೦ |

*(ಮುಂದುವರೆಯುತ್ತದೆ)*

RNI No. 17139/69
"Siddaganga" Monthly - Postal Reg. No. KA/SK/TMR/385/2003-05



ಸಿದ್ಧಗಂಗಾ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ ತುಮಕೂರು ನಾಗರಿಕ ವೇದಿಕೆಯಿಂದ ಜಿಲ್ಲಾಧಿಕಾರಿ ಮಲ್ಲಿಕಾರ್ಜುನ ದ್ಯಾಬೇರಿ ಅವರ ಬೀಳ್ಕೊಡುಗೆ ಸಮಾರಂಭ. ರಾಮಕೃಷ್ಣ ಮಠದ ಶ್ರೀಗಳು, ಹಿರೇಮಠದ ಶ್ರೀ ಶ್ರೀಗಳು, ನೂತನ ಜಿಲ್ಲಾಧಿಕಾರಿ ಶ್ರೀ ಎಸ್.ಆರ್. ಉಮಾಶಂಕರ ಉಪಸ್ಥಿತರಿದ್ದರು.



ತುಮಕೂರು ಬಿ.ಹೆಚ್. ರಸ್ತೆಯಲ್ಲಿ ಆರಂಭಗೊಂಡ 'ರಿಲಯನ್ಸ್ ವೆಬ್‌ವರ್ಲ್ಡ್'ನ್ನು ಸಿದ್ಧಗಂಗಾ ಶ್ರೀ ಶ್ರೀಗಳವರು ಉದ್ಘಾಟಿಸಿದರು. ಮಾಲೀಕ ಓಂಕಾರಮೂರ್ತಿ, ಎಸ್. ನಾಗರಾಜ್, ಟಿ.ಆರ್. ಸದಾಶಿವಯ್ಯ, ಜಿ.ಎಸ್. ಸೋಮಶೇಖರ್ ಹಾಜರಿದ್ದರು.



ತುಮಕೂರಿನ ಗಾಂಧಿನಗರದಲ್ಲಿ ಡಾ. ಕೆ. ನರಸಿಂಹಯ್ಯ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯ ನೂತನ ಕಟ್ಟಡದ ಪ್ರಾರಂಭೋತ್ಸವವು ಪರಮಪೂಜ್ಯ ಶ್ರೀ ಶ್ರೀಗಳವರಿಂದ ನೆರವೇರಿತು. ಡಾ. ಕೆ.ಎನ್. ಸುಧೀರ್ ಮತ್ತು ಕುಟುಂಬದವರು ಹಾಜರಿದ್ದರು



"ಲೋಕಪ್ರಿಯ" ವಾರಪತ್ರಿಕೆ ಯನ್ನು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಜೀಯವರು ಬಿಡುಗಡೆ ಮಾಡಿದರು. ಪತ್ರಕರ್ತ ಬಸವರಾಜ ದೊಡ್ಡಮನಿ, ಪ್ರಭುದೇವ, ಜಯಶಂಕರ, ಕೆ.ಸಿ. ಶಿವಗಂಗಯ್ಯ ಹಾಜರಿದ್ದರು.



ಸಿದ್ಧಗಂಗಾ ಮಹಿಳಾ ಪದವಿ ಕಾಲೇಜಿನಲ್ಲಿ ಎನ್.ಎಸ್.ಎಸ್., ಎನ್.ಸಿ.ಸಿ., ಕ್ರೀಡೆ ಚಟುವಟಿಕೆಗಳಿಗೆ ಡಾ. ಚನ್ನವೀರ ಕಣವಿ ಚಾಲನೆ ನೀಡಿದರು. ಸಿದ್ಧಗಂಗಾ ಶ್ರೀಗಳು, ಉಪಕುಲಪತಿ ಡಾ. ಓ. ಅನಂತರಾಮಯ್ಯ, ಚಿಂದೋಡಿ ಲೀಲಾ, ಮೈಸೂರು ಆನಂದ್ ಎಸ್. ಅನಸೂಯಮ್ಮ ಉಪಸ್ಥಿತರಿದ್ದರು.




ಸಿದ್ಧಗಂಗಾ ಪಾಲಿಟೆಕ್ನಿಕ್‌ನ ಪ್ರಥಮ ವರ್ಷದ ತರಗತಿಗಳ ಪ್ರಾರಂಭೋತ್ಸವವನ್ನು ಸಿದ್ಧಗಂಗಾ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು ನೆರವೇರಿಸಿದರು. ಪ್ರಾಂಶುಪಾಲ ಶ್ರೀ ಕೆ.ಎಂ. ಚಂದ್ರಶೇಖರಯ್ಯ, ಮತ್ತು ಕಛೇರಿ ಸಿಬ್ಬಂದಿಯವರು ಹಾಜರಿದ್ದರು.

Printed at: Geetanjali Graphics #4, M.S.R. Indl Estate, Bangalore - 54. Ph: 23604087